# ಅಲ್ಲಮಪ್ರಭು

## ಅವರ ಕಥೆ

ಜಿ. ಪಿ. ರಾಜರತ್ನಂ

ಪ್ರಕಾಶಕರು:

ಬಿ. ಬಿ. ಡಿ. ಪವರ್ ಪ್ರೆಸ್

ಅರಳೇಪೇಟೆ, ಬೆಂಗಳೂರು

# ಅರಿಕೆ

"ಕೆರೆಯ ನೀರನು ಕೆರೆಗೆ ಚೆಲ್ಲಿ"

ಎಂದು ಹೇಳಿದ ಹಾಗೆ

"ಚಾಮರಸ"

ಎಂಬ ಕನ್ನಡದ ಕವಿ ರಚಿಸಿದ

"ಪ್ರಭುಲಿಂಗಲೀಲೆ"

ಎಂಬ ಸೊಗಸಾದ ಕಾವ್ಯದ ತೋಟದಿಂದ

"ಅಲ್ಲಮಪ್ರಭು ಅವರ ಕಥೆ"

ಎಂಬ ಈ ಹೂಬೊಗಸೆಯನ್ನು ಆಯ್ದು ತಂದು

ಪ್ರಭುದೇವರ ಶ್ರೀಪಾದಗಳಲ್ಲಿ

ಸಮರ್ಪಿಸಿದ್ದೇನೆ.

ಕನ್ನಡಿಗರಿಗೆ ಈ ಕೃತಿ ಪ್ರೀತಿಯಾಗಲಿ.

—ಜಿ. ಪಿ. ರಾಜರತ್ನಂ—

# ಗುರುರಾಜ

“ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ

ಅಂಬುಜಕೆ ಭಾನುವಿನ ಉದಯದ ಚಿಂತೆ”

ಎಂದು ರಾಗ ಎಳೆಯುತ್ತಾ ಮನೆಯ ಮುಂದಿನ ಮೆಟ್ಟಿಲು ಹತ್ತಿ, ಶಿವು ಬಾಗಿಲು ತಟ್ಟಿದ. “ಅಮ್ಮಾ ನಾನು. ಬಾಗಿಲು” ಎಂದು ಕೂಗಿದ. ಮತ್ತೆ ರಾಗ ಮುಂದುವರಿಸಿದ:

“ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ.

ಎನಗೆ ನಮ್ಮ ಕೂಡಲ ಸಂಗಮದೇವನ ನೆನೆವ ಚಿಂತೆ.”

ಶಿವೂತಾಯಿ ಬಾಗಿಲು ತೆಗೆಯುತ್ತಾ “ಯಾರು ಯಾರಿಗೋ ಯಾರದು ಯಾರದೋ ಚಿಂತೆ ಎಂದು ರಾಗ ಎಳೆಯುತ್ತೀಯಲ್ಲ. ಮನೆಯಲ್ಲಿ ತಾಯಿ ಇದ್ದಾಳೆ, ರಾತ್ರೆ ಎಂಟು ಗಂಟೆ ಒಂಬತ್ತು ಗಂಟೆಗೆ ಮಗ ಮನೆಗೆ ಬರುವವರೆಗೂ ಆಕೆ ಏನು ಪೇಚಾಡುತಾಳೆ, ಎಂದು ನಿನಗೆ ಸ್ವಲ್ಪವೂ ಚಿಂತೆ ಬೇಡವೇನೋ, ಶಿವು?” ಎಂದು ಮೃದುವಾಗಿ ಆಕ್ಷೇಪಿಸಿದರು.

ಶಿವು ತನ್ನ ತಪ್ಪು ಒಪ್ಪಿಕೊಂಡ. “ಹೌದಮ್ಮ, ಆದರೆ, ಇವತ್ತು ಕಾಲೇಜಿನಲ್ಲಿ ಬಸವಜಯಂತಿ ಆಚರಿಸಿದರು. ಅಲ್ಲಿ ಇಷ್ಟು ಹೊತ್ತು ಆಗಿಹೋಯಿತು.” ಎಂದ.

“ಬಸವಜಯಂತಿ? ಏನೋ ಅದು?” ಎಂದರು, ಶಿವೂತಾಯಿ.

“ಅಯ್ಯೋ! ಬಸವಜಯಂತಿ ಗೊತ್ತಿಲ್ವೇ, ಅಮ್ಮ?” ಎಂದ, ಶಿವು.

“ಬಸವಜಯಂತಿ ಹಾಗಿರಲಿ; ಈ ಬಸವ ಯಾರೋ ಅದೂ ಕಾಣೆನಪ್ಪ ನಾನು. ಮನೆಕೆಲಸ ಮಾಡಿಕೊಂಡಿರೊ ನಮಗೆ ಇದೆಲ್ಲಾ ಹೇಗೆ ತಿಳಿಯಬೇಕಪ್ಪ? ಈಗ ನೀನು

ಇದ್ದೀಯಲ್ಲ ಮಗ, ಓದಿದವನು, ಕಲಿತವನು 'ಎಲಾ ತಾಯಿಗೆ ಇದನ್ನು ತಿಳಿಸಬೇಕು' ಎಂದು ವಿರಾಮಮಾಡಿಕೊಂಡು ಏನಾದರೂ ಇಷ್ಟು ಹೇಳಬಾರದೆ?"

"ಹೌದಮ್ಮಾ ಹೇಳಬೇಕಾದ್ದೆ. ಇದೋ, ಇವತ್ತು ಹೇಗೂ ಒಳ್ಳೇ ದಿವಸ, ಬಸವಜಯಂತಿ. ಇವತ್ತು ನಿನಗೆ ಬಸವಣ್ಣನವರ ವಿಷಯ ನನಗೆ ತಿಳಿದಿರೋ ಅಷ್ಟು ಹೇಳಲಾ?"

"ಹೇಳುವೆಯಂತೆ. ಮೊದಲು ಬಟ್ಟೆ ತೆಗೆದು, ಕೈಕಾಲು ತೊಳೆದುಕೊ. ಒಂದು ಸಂಧ್ಯಾವಂದನೆ ಶಾಸ್ತ್ರ ಮುಗಿಸಿ, ಊಟಮಾಡು. ಆಮೇಲೆ ನಿಧಾನವಾಗಿ ಕೇಳೋಣ, ನಿನ್ನ ಕತೇನ."

ಶಿವೂ ತಾಯಿ ಹೇಳಿದ ಹಾಗೆಯೇ ಮೈಲಿಗೆ ಬಟ್ಟೆ ಕಳಚಿ, ಕೈಕಾಲು ತೊಳೆದು, ಮಗಟ ಸುತ್ತಿಕೊಂಡು, ವಿಭೂತಿ ಇಟ್ಟುಕೊಂಡು, ಸಾವಕಾಶವಾಗಿಯೇ ಸಂಧ್ಯಾವಂದನೆ ಮಾಡಿ ಮುಗಿಸಿ, ಊಟಕ್ಕೆ ಕುಳಿತ. ಅನ್ನ ಕಲಸಿ ಊಟಮಾಡುತ್ತಾ, ಹಾಗೆಯೇ ಮಾತೂ ಮುಂದುವರಿಸಿದ.

"ಈ ಬಸವಣ್ಣನವರು, ಅಮ್ಮ ಈಗ ಒಂದು ಎಂಟುನೂರು ವರ್ಷದ ಹಿಂದೆ ನಮ್ಮ ಕನ್ನಡ ದೇಶದಲ್ಲಿ ಇದ್ದವರು. ನಾವು ಈಗ ಧಾರವಾಡದ ಸೀಮೆ ಎನ್ನುವುದಿಲ್ಲವೇ—ಆ ಕಡೆ ಇಂಗಳೇಶ್ವರ ಬಾಗೇವಾಡಿ ಎಂಬ ಅಲ್ಲಿ ಅವರು ಹುಟ್ಟಿದ್ದು. ಅವರಿಗೆ ಚಿಕ್ಕವರಾಗಿರೋವಾಗಿನಿಂದಲೂ 'ಈಶ್ವರ ಎಂಬ ದೇವರು ಇದ್ದಾನೆ, ನಾವೆಲ್ಲಾ ಆತನಲ್ಲಿ ಭಕ್ತಿಯಿಂದ ನಡೆದುಕೊಳ್ಳಬೇಕು' ಎನ್ನುವ ದೊಡ್ಡ ಬುದ್ಧಿ ಇತ್ತಂತೆ. ಅವರಿಗೆ ಉಪನಯನ ಆಗುವ ವಯಸ್ಸಿನಲ್ಲಿಯೇ ಅವರು ಮನೆಬಿಟ್ಟು ಹೋಗಿ, ಕೃಷ್ಣಾನದೀ ದಂಡೆಯಲ್ಲಿ ಕಪ್ಪಡಿ ಎಂದು ಸಂಗಮ, ಅಲ್ಲಿ ಇದ್ದ ಸಂಗಮೇಶ್ವರನ ಸೇವೆ ಮಾಡಿಕೊಂಡೇ ಬೆಳೆದರಂತೆ. ಸಂಗಮಕ್ಕೆ ಬರುತ್ತಿದ್ದ ಶಿವಭಕ್ತರೆಲ್ಲ ಅವರ ಭಕ್ತಿಯನ್ನು ತುಂಬ ಮೆಚ್ಚಿಕೊಳ್ಳುತ್ತಿದ್ದರಂತೆ. ಆವಾಗ ನಮ್ಮ ಕರ್ಣಾಟಕದ ಉತ್ತರದ ಕೊನೆಗೆ ಕಲ್ಯಾಣ

ಎಂದು ಒಂದು ಪಟ್ಟಣ, ಬಿಜ್ಜಳ ಎಂದು ಅದರ ರಾಜ. ಆ ರಾಜನ ಮಂತ್ರಿ ಬಸವಣ್ಣನವರಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟು, ಅಳಿಯನನ್ನು ಕಲ್ಯಾಣಕ್ಕೇ ಕರೆಸಿಕೊಂಡ. ಅಲ್ಲಿ ಬಸವಣ್ಣನವರು ಜೀವನೋಪಾಯಕ್ಕಾಗಿ ಮೊದಲು ಕರಣಿಕರಾಗಿ ಕೆಲಸಕ್ಕೆ ಸೇರಿಕೊಂಡರು. ಅನಂತರ ಅವರ ಕುಶಾಗ್ರಬುದ್ಧಿಯಿಂದ ಒಂದು ಸಲ ಬಿಜ್ಜಳನಿಗೆ ಅಪಾರವಾದ ನಿಧಿ ಸಿಕ್ಕಿತು. ಅಂದಿನಿಂದ ಅವರು ಕಲ್ಯಾಣದಲ್ಲಿ, ಬಿಜ್ಜಳನ ಆಸ್ಥಾನದಲ್ಲಿ ಭಂಡಾರಿಯಾದರು, ಅಲ್ಲಿಗೆ ದಂಡನಾಯಕನಾದರು. ಹೀಗೆ ಲೌಕಿಕವಾಗಿ ಎಷ್ಟೇ ಮೇಲುಮೇಲಕ್ಕೆ ಏರುತ್ತಿದ್ದರೂ, ಬಸವಣ್ಣನವರು ಶಿವನನ್ನು ಮರೆಯಲಿಲ್ಲ ಶಿವಭಕ್ತಿಯನ್ನು ಮರೆಯಲಿಲ್ಲ. ಲೋಕಕ್ಕೆಲ್ಲ ಶಿವಭಕ್ತಿಯನ್ನು ಬೋಧಿಸಿದರು. ಯಾರು ಯಾರು ಶಿವಭಕ್ತರಾದವರೋ ಅವರನ್ನೆಲ್ಲ ಸಾಕ್ಷಾತ್ ಶಿವನೆಂದೇ ಭಾವಿಸಿ, ಬಸವಣ್ಣನವರು ಆ ಜಂಗಮರಿಗೆಲ್ಲ ಪೂಜೆಮಾಡಿ, ಅವರಿಗೆಲ್ಲಾ ಆರಾಧನೆ ಮಾಡುತ್ತಿದ್ದರು. ಬರುತ್ತಬರುತ್ತ ಕಲ್ಯಾಣ ಶಿವಭಕ್ತರಿಗೆಲ್ಲ ದೊಡ್ಡ ಪುಣ್ಯಕ್ಷೇತ್ರವಾಯಿತು. ಬಸವಣ್ಣನವರನ್ನು ಕಂಡರೆ ಗೌರವ, ಪೂಜ್ಯಬುದ್ಧಿ, ವಿಶ್ವಾಸ ಎಲ್ಲ ಕಡೆಯೂ ಹೆಚ್ಚುತ್ತ ಬಂತು. ಆದರೆ ಅವರ ಅಭಿವೃದ್ಧಿ ಯನ್ನು ಕಂಡು ಸಹಿಸಲಾರದ ಕೆಲವರೂ ಅಲ್ಲಿ ಇದ್ದರು. ಅವರಿಗೆ ಬಸವಣ್ಣನವರ ಮೇಲೆ ಹೊಟ್ಟೆಕಿಚ್ಚು ಹೆಚ್ಚಾಯಿತು. 'ಬಸವಣ್ಣನವರು ಬಿಜ್ಜಳನ ಭಂಡಾರವನ್ನು ಸೂರೆಮಾಡುತ್ತಿದ್ದಾರೆ, ಅದನ್ನು ಜಂಗಮರಿಗೆ ಹಂಚುತ್ತಿದ್ದಾರೆ, ಜಂಗಮರ ಗುಪ್ತಸೈನ್ಯವನ್ನು ಕಟ್ಟುತ್ತಿದ್ದಾರೆ' ಎಂದೆಲ್ಲಾ ಅರಸನ ಹತ್ತಿರ ಚಾಡಿ ಹೇಳಿದರು. ಅರಸನೂ ಬುದ್ಧಿ ಯಿಲ್ಲದೆ ಅವರ ಮಾತಿಗೆ ಕಿವಿಕೊಟ್ಟು, ಬಸವಣ್ಣನವರಿಗೆ ಕಿರುಕುಳ ಕೊಡತೊಡಗಿದ. ಬಸವಣ್ಣನವರು ನೋಡುವವರೆಗೂ ನೋಡಿದರು: ಒಂದು ಕಡೆ ಒಡೆಯನಾದ ಬಿಜ್ಜಳ ಮೂರುಮೂರು ದಿವಸಕ್ಕೂ ಆಗದವರ ಮಾತು ಕೇಳಿಕೊಂಡು ತನ್ನನ್ನು ಹಂಗಿಸುವನು, ನಿಂದಿಸುವನು, ಹೀಯಾಳಿಸುವನು; ಇನ್ನೊಂದು ಕಡೆ ಜಂಗಮರಲ್ಲಿಯೇ ಕೆಲವರು, ಶಿವಭಕ್ತಿ ಸಾಕಷ್ಟು ಇಲ್ಲದಿದ್ದವರು, ತಮಗೆ ಮನಸ್ಸು ಬಂದಂತೆ ಮಾತನಾಡುವುದೂ ಕೆಲಸಮಾಡುವುದೂ ಮಿತಿಮೀರಿ, ಬಸವಣ್ಣನವರಿಗೆ ಮನಸ್ಸು ತುಂಬ ನೊಂದಿತು. ಕಟ್ಟಕಡೆಗೆ ಈ ಎರಡೂ ಕಡೆಯ ಅನ್ಯಾಯಗಳಿಗೂ

ಅಧರ್ಮಗಳಿಗೂ ಬೇಸತ್ತು, ಬಸವಣ್ಣನವರು ಕಲ್ಯಾಣವನ್ನು ಬಿಟ್ಟು, ಪುನಃ ಕಪ್ಪಡಿಗೆ ಹಿಂದಿರುಗಿದರು. ಅಲ್ಲಿ ಸಂಗಮೇಶ್ವರನ ಸೇವೆಯನ್ನು ಮಾಡುತ್ತ ಇದ್ದು, ಅಲ್ಲಿಯೇ ಶಿವೈಕ್ಯರಾದರು."

ಶಿವು ಮೊದಲುಮೊದಲು ತುತ್ತುತುತ್ತಿಗೆ ಒಂದೊಂದು ಮಾತನಾಡುತ್ತಿದ್ದವನು, ಬರುತ್ತಬರುತ್ತ ಕಲಸಿದ ಅನ್ನದ ಮೇಲೆ ಕೈ ಹಾಗೇ ಇಟ್ಟು, ಒಂದೇ ಉಸಿರಿಗೆ ಮಾತನಾಡುತ್ತ, ಕತೆಯನ್ನು ಮುಗಿಸಿದ್ದ.

"ಕೈಯೆಲ್ಲ ಒಣಗಿಹೋಯಿತಲ್ಲೊ, ಶಿವು. ಮೊದಲು ಊಟ ಮಾಡಿ ಮುಗಿಸು, ಬಡಿಸಿದ್ದು ಆರಿಹೋಗುತ್ತಾ ಇದೆ. ಕೈ ತೊಳೆದುಕೊಂಡಾದ ಮೇಲೆ ಮುಂದಿನ ಮಾತು." ಎಂದರು, ಶಿವೂತಾಯಿ.

ಶಿವು ಮಾತಾಡದೆ ಊಟ ಮಾಡುತ್ತಿದ್ದ. ಪುನಃ ಎಲ್ಲಿ ಮಾತನಾಡತೊಡಗಿ ಊಟ ನಿಲ್ಲಿಸಿಬಿಡುವನೋ ಎಂದು ಅವನ ತಾಯಿ ತಾವೇ ಮಾತನಾಡತೊಡಗಿದರು: "ಎಷ್ಟು ಮುದ್ದಾಗಿ ಕತೆ ಹೇಳುತ್ತೀಯೆ, ಶಿವು! ಇವತ್ತು ಸಂಜೆ ಇಷ್ಟು ಹೊತ್ತೂ ಕೇಳಿದ್ದನ್ನು ಅದೆಷ್ಟು ಸೊಗಸಾಗಿ, ಸಂಗ್ರಹವಾಗಿ, ಸ್ವಾರಸ್ಯವಾಗಿ, ಸರಸರಾ ಎಂದು, ಹೇಳುತ್ತೀಯೊ! ಅದಕ್ಕೇನೆ ಆವೊತ್ತು ನಿಮ್ಮ ಮೇಷ್ಟರು ಯಾರೋ ಬಂದಿದ್ದವರು, ನಿಮ್ಮ ತಂದೆಯ ಹತ್ತಿರ 'ನಿಮ್ಮ ಶಿವು ಹಾಗೆ! ನಿಮ್ಮ ಶಿವು ಹೀಗೆ!' ಎಂದು ಏನೇನೋ ಹೊಗಳುತ್ತಾ ಇದ್ದರು! ದೇವರು ಹೀಗೇ ನಿನಗೆ ಪೂರ್ಣಾಯುಸ್ಸು ಕೊಟ್ಟು ಬೆಳಸಲಿ ಎಂದು ಅಷ್ಟೇಪ್ಪ ನನ್ನ ಹರಕೆ, ದೇವರಲ್ಲಿ." ಎಂದರು.

"ಅಮ್ಮಾ! ಜನರನ್ನು ಹೀಗೆಲ್ಲ ಅವರೆದುರಿಗೆ ಹೊಗಳಬಾರದು ಎಂದು ಬಸವಣ್ಣನವರು ಹೇಳಿದ್ದಾರಮ್ಮ. ತಮ್ಮನ್ನು ಜನ ಹೊಗಳುವುದನ್ನ ಕೇಳಿದಹಾಗೆಲ್ಲ, ಕೇಳಿದವರಿಗೆ ತಲೆ ತಿರುಗಿ ಹೋಗುತ್ತಂತೆ, ಅಹಂಕಾರ ಅತಿಯಾಗುತ್ತಂತೆ. ಬಸವಣ್ಣನವರು ಒಂದು ಕಡೆ ಹೇಳಿದ್ದಾರೆ, ಅದರ ಅರ್ಥ ಹೀಗೆ: 'ನನ್ನವರು ನನ್ನನ್ನು

ಹೊನ್ನ ಶೂಲಕ್ಕೆ ಹಾಕಿದರು, ನನ್ನನ್ನು ಹೊಗಳಿ ಹೊಗಳಿ. ಈ ಹೊಗಳಿಕೆಯ ಮನ್ನಣೆಯೇ ನನ್ನ ಪಾಲಿಗೆ ಮಸೆದ ಅಲಗಾಗಿದೆ. ದೇವರೇ! ನಿನಗೆ ನಿಜವಾಗಿಯೂ ನನ್ನ ಮೇಲೆ ಕರುಣೆಯಿರುವುದಾದರೆ, ಈ ಹೊಗಳಿಕೆಗೆ ನೀನು ಅಡ್ಡಬಾರಾ, ಧರ್ಮೀ!' ಎಂದು ಬಸವಣ್ಣನವರು ದೇವರಿಗೆ ಮೊರೆಯಿಟ್ಟಿದ್ದಾರೆ."

"ಬಸವಣ್ಣನವರ ಅಂಥವರು ಹಾಗೆ ಹೇಳುವುದೇನೋ ಸರಿಯೆ, ಶಿವು. ಆದರೆ ಸಾಮಾನ್ಯ ಜನಕ್ಕೆ ಒಂದೊಂದು ಸಲ ಒಳ್ಳೇ ಮಾತು ಹೇಳಿದರೆ, ಅದೇನೂ ತಪ್ಪಾಗುವುದಿಲ್ಲ. ಪ್ರೋತ್ಸಾಹ ಕೊಡದೆ ಹೋದರೆ, ಚಿಕ್ಕವರಿಗೆ ಉತ್ಸಾಹ ಬರುವುದು ಹೇಗೊ? ಅದರಲ್ಲೂ ಮೇಷ್ಟರು ಶಿಷ್ಯನ ವಿಷಯ ಒಂದು ಮಾತು ಆಡಿದರೆ, ತಾಯಿ ಮಗನ ವಿಷಯ ಒಂದು ಮಾತು ಆಡಿದರೆ, ಅದರಲ್ಲಿ ಏನಪ್ಪ ದೋಷ?"

"ಛೆ ಛೆ, ಬಿಡತು ಎನ್ನಮ್ಮ ದೋಷ ಎಂದು ಯಾರು ಹೇಳಿದರು? ನೀನು ಹೊಗಳಿಕೆ ಎಂದೆಯಲ್ಲಾ, ಅದರಿಂದ ನನಗೆ ಬಸವಣ್ಣನವರ ಮಾತು ಜ್ಞಾಪಕ ಬಂತು ಹೇಳಿದೆ, ಅಷ್ಟೆ."

"ಅದೇನೋ. ಸರಿಯೆ, ಹಾಗೇ ಇರಬೇಕು ಬಸವಣ್ಣನವರು ಎಂದ ಹಾಗೆ, ಅಹಂಕಾರ ಇಲ್ಲದೆ, ಅದು ಕೆಲವರಿಗೆ ಹುಟ್ಟುವಾಗಿಂದಲೂ ಹಾಗೇ ಬಂದಿರುತ್ತೆ."

"ಅದೇಮ್ಮ, ಇಲ್ಲಿ ಸ್ವಾರಸ್ಯ! ಬಸವಣ್ಣನವರಿಗೆ ಅವರು ಬಹಳ ಪ್ರಖ್ಯಾತಿಗೆ ಬಂದು, 'ಇವರ ಸಮಾನ ಇನ್ನಿಲ್ಲ' ಎನ್ನಿಸಿಕೊಂಡಾಗ ಕೂಡ, ಅವರೊಳಗೆ ಒಂದು ಚಿಟಕಿ ಅಹಂಕಾರ ಸೇರಿಕೊಂಡಿತ್ತಂತೆ. ಕಡೆಗೆ ಅದು ಕೂಡ, ಅವರ ಗುರುಗಳ ಅನುಗ್ರಹದಿಂದ ಕರಗಿಕಾಣದ ಹಾಗೆ ಕೊಚ್ಚಿಹೋಯಿತಂತೆ. ಅದನ್ನು ಈ ದಿನ ಸಂಜೆ ಉಪನ್ಯಾಸದಲ್ಲಿ ಬಹು ಸೊಗಸಾಗಿ ಹೇಳಿದರು. ಕೇಳುತ್ತೀಯಾ, ಅಮ್ಮ ಆ ಕಥೇನ? ಬಸನಣ್ಣನವರ ಅಹಂಕಾರದ ಕೊನೇಕಣ ಕತ್ತರಿಸಿಹೋದ ಕತೇನ?"

"ನೀನು ಮೊದಲು ಕೈ ತೊಳೆದುಕೊ, ಹೋಗಿ. ಅಷ್ಟರಲ್ಲಿ ನಾನೂ ಎಲೆ ಹಾಕಿಕೊಂಡು ಬಡಿಸಿಕೊಳ್ಳುತೇನೆ. ನಿಮ್ಮ ತಂದೆ ಇವತ್ತು ಸರ್ಕೀಟಿಗೆ ಹೋಗಿದ್ದಾರೆ. ಅಲ್ಲೇ ಊಟ ಮುಗಿಸಿಕೊಂಡು, ರಾತ್ರೆ ಹನ್ನೆರಡು ಗಂಟೆ ಹೊತ್ತಿಗೆ ಕಾರಿನಲ್ಲಿ ಬರುತ್ತಾರಂತೆ. ಹೇಗೂ ಅವರು ಬರುವವರೆಗೂ ನನಗೆ ನಿದ್ರೆ ಬರುವುದಿಲ್ಲ, ಅಲ್ಲಿಯವರೆಗೂ ನೀನು ಏನೇನು ಹೇಳಿದರೂ ನಾನು ಕೇಳುವುದಕ್ಕೆ ಸಿದ್ಧ."

"ಶಿವು ಕೈ ತೊಳೆದು ಒರಸಿಕೊಂಡು ಬಂದ. ತಾಯಿ ಬಡಿಸಿಕೊಂಡು ಕಲಸುತ್ತಿದ್ದರು. ಅವರ ಊಟ ಸಾಗುತ್ತಿರುವಾಗ ಶಿವು ತನ್ನ ಕತೆಯನ್ನು ತಾನು ಸಾಗಿಸಿದ:

ಬಸವಣ್ಣನವರು ಉತ್ತರದ ಕಲ್ಯಾಣದಲ್ಲಿ ಶಿವಭಕ್ತಿಯನ್ನು ಬೆಳೆಸುತ್ತಾ ಬೋಧಿಸುತ್ತಾ ಇದ್ದರು ಎಂದು ಹೇಳಲಿಲ್ಲವೆ—ಅದೇ ವೇಳೆಯಲ್ಲಿ ಈ ಕಡೆ ಕರ್ಣಾಟಕದ ದಕ್ಷಿಣದಲ್ಲಿ ಅಲ್ಲಮ ಎಂಬ ಇನ್ನೊಬ್ಬರು, ಮಹಾ ಶಿವಜ್ಞಾನಿಗಳು, ಇದ್ದರು. ನಮ್ಮ ಶಿವಮೊಗ್ಗ ಜಿಲ್ಲೆಯಲ್ಲಿ ಷಿಕಾರಿಪುರ ತಾಲ್ಲೂಕು ಇದೆಯಲ್ಲ, ಅನ್ನಿಗೆ ಸೇರಿದ ಬಳ್ಳಿಗಾವೆ ಎಂಬ ಸ್ಥಳದವರು ಇವರು. ಇವರ ತಂದೆಯ ಹೆಸರು—ನಿರಹಂಕಾರ; ತಾಯಿಯ ಹೆಸರು—ಸುಜ್ಞಾನಿ. ಈ ತಾಯಿತಂದೆಗೆ ಲೋಕದಲ್ಲಿ ಬೇಕಾದ ಸಂಪತ್ತು ಯಥೇಷ್ಟವಾಗಿದ್ದರೂ, ತಮಗೆ ಮಕ್ಕಳಿಲ್ಲವೆಂಬ ಕೊರತೆ ಇವರನ್ನು ತಿನ್ನುತ್ತಿತ್ತು. ಮಕ್ಕಳಿಲ್ಲದವರ ಮನೆ ವ್ಯರ್ಥ ಎಂದು ಆ ದಂಪತಿಗಳು ಒಂದು ಸಲ 'ಪುತ್ರನನ್ನು ಕರುಣಿಸು' ಎಂಬುದಾಗಿ ಶಿವನನ್ನು ಕುರಿತು ಧ್ಯಾನಮಾಡಿದರು.

ಶಿವನು ಅವರ ಧ್ಯಾನಕ್ಕೆ ಮೆಚ್ಚಿದನು. ಒಂಬತ್ತು ತಿಂಗಳು ಆದಮೇಲೆ ಅವರಿಗೆ ಒಂದು ಗಂಡುಮಗು ಆಯಿತು. ಕೋಟಿ ಸೂರ್ಯರ ಪ್ರಕಾಶದಂತೆ ಆ ಮಗು ವರ್ಚಸ್ವಿಯಾಗಿತ್ತು. ಸೂರ್ಯನ ಹಾಗಿದ್ದರೂ ಸೂರ್ಯನಂತೆ ಸುಡುತ್ತಿರಲಿಲ್ಲ, ಚಂದ್ರನ ಹಾಗಿದ್ದರೂ ಚಂದ್ರನಂತೆ ಕೊರೆಯುತ್ತಿರಲಿಲ್ಲ, ಬೆಂಕಿಯ ಹಾಗಿದ್ದರೂ ಬೆಂಕಿಯಂತೆ ಉರಿಸುತ್ತಿರಲಿಲ್ಲ; ಆ ಮಗುವನ್ನು ನೋಡಿದರೆ, ಸಾಕ್ಷಾತ್ ಶಿವನೇ ಶಿಶುರೂಪಿನಲ್ಲಿ

ಬಂದಹಾಗಿತ್ತು. ನೋಡಿದರೆ, ರೂಪ ಕಣ್ಣು ತುಂಬ ಇರುವುದು; ಆದರೆ, ಎತ್ತಿಕೊಂಡಾಗ ಕೈತುಂಬ ಇದ್ದಂತೆ ಕಂಡರೂ ಕೈಗೆ ಸ್ಪರ್ಶವಾಗುತ್ತಿರಲಿಲ್ಲ, ಕೈಗೆ ಭಾರ ತಿಳಿಯುತ್ತಿರಲಿಲ್ಲ.

ಇಂತಹ ಅದ್ಭುತನಾದ ಬಾಲಕನು ಇನ್ನೂ ಚಿಕ್ಕವನಾಗಿರುವಾಗಲೇ ಸದ್ವಿದ್ಯೆಯನ್ನೆಲ್ಲ ಕಲಿತು, ಸದಾಚಾರವನ್ನೆಲ್ಲ ನಡೆದು, ಇತರರನ್ನೆಲ್ಲ ಅಲ್ಲ ಎನ್ನಿಸಿದ ಆ ಕಾರಣದಿಂದ 'ಅಲ್ಲಮಪ್ರಭು' ಎಂದು ಹೆಸರು ಪಡೆದನು. ಸ್ವಲ್ಪ ಕಾಲದಲ್ಲಿಯೇ ಆ ಬಾಲಭಾವವನ್ನು ಬದಿಗಿರಿಸಿ, ಮನೆಯನ್ನು ಬಿಟ್ಟು ತೆರಳಲು ಸಿದ್ಧನಾದನು. ತನ್ನ ತಾಯಿತಂದೆಗೆ ಹೇಳಿದನು; "ಮಗುವಾಗಬೇಕೆಂದು ನೀವು ಧ್ಯಾನಮಾಡಿದಿರಿ. ನಿಮ್ಮ ಧ್ಯಾನಕ್ಕೆ ಪ್ರೀತನಾಗಿ, ನಾನೂ ನಿಮಗೆ ಮಗುವಾಗಿ, ಇದುವರೆಗೆ ಇದ್ದೆ. ಇನ್ನು ಈ ಬಾಲ್ಯ ನನಗೆ ಸಾಕು. ಇನ್ನು, ನನಗೆ ಸಹಜವಾದ ಲೀಲೆಗೆ ನಾನು ಹೋಗಿ, ನನ್ನ ನಿತ್ಯ ಸುಖವನ್ನು ನಾನು ಅನುಭವಿಸುತ್ತೇನೆ." ಮಗು ಹೀಗೆ ಹೇಳಿ ಹೊರಡುವಾಗ ಆ ತಾಯಿತಂದೆ ಎಂದರು: "ಪರದೈವವಾದ ನೀನು ಪ್ರತ್ಯಕ್ಷವಾಗಿ ನಮ್ಮ ಮಗನಾದುದರಿಂದ ನಾವು ನಿನ್ನ ಸೇವೆಮಾಡುವ ಪುಣ್ಯಲಭಿಸಿತು. ಆದರೆ ಈಗ ನೀನು ನಮ್ಮನ್ನು ಅಗಲಿ ಹೋದರೆ, ನಮ್ಮ ಗತಿಯೇನೆಂದು ನಮಗೆ ಚಿಂತೆ."

ಆದಕ್ಕೆ ಅಲ್ಲಮಪ್ರಭು ಅವರಿಗೆ ಹೀಗೆಂದರು: "ನಿರಹಂಕಾರ ಸುಜ್ಞಾನಿ ಇವರುಗಳ ಸಂಗವನ್ನು ಬಿಟ್ಟು ಪ್ರಭುವಾದರೂ ಹೇಗೆ ಇರಬಲ್ಲನು? ನಾನು ಇಲ್ಲಿ ನಿಲ್ಲದೆ ಹೊರಟುಹೋದರೂ, ನೀವು ಎಲ್ಲೆಲ್ಲಿ ಇರುವಿರೋ ಅಲ್ಲೆಲ್ಲ ನಾನು ಇದ್ದೇ ಇರುತ್ತೇನೆ. ಈ ಮಾತು ನಿಜವೆಂದು ತಿಳಿಯಬೇಕಾದರೆ ನಿಗಮಗಳನ್ನು ನೋಡಿರಿ, ಶಾಸ್ತ್ರಗಳನ್ನು ವಿಚಾರಿಸಿರಿ, ಅನುಭಾವಿಗಳ ಮಾತನ್ನು ಕೇಳಿರಿ. ನಾನು ನಿಮ್ಮನ್ನು ಅಗಲಿದರೂ ಅಗಲದೆ ಒಂದಿಗೇ ಇರತಕ್ಕವನು."

ಹೀಗೆ ಅಲ್ಲಮಪ್ರಭು ಮೊತ್ತಮೊದಲು ತನ್ನ ತಾಯಿತಂದೆಯರಿಗೆ ಶಿವಜ್ಞಾನದ ಗುಟ್ಟನ್ನು ತಿಳಿಸಿಕೊಟ್ಟು, ಅನಂತರ ಅದೇ ಗುಟ್ಟನ್ನು ಲೋಕದಲ್ಲಿ ಇತರರಿಗೆ

ತಿಳಿಸಿಕೊಡುವುದಕ್ಕಾಗಿ ತೆರಳಿದನು. ಅದುವರೆಗೆ ಪ್ರಭು ಆಗಿದ್ದವನು ಅಂದಿನಿಂದ ಪ್ರಭುದೇವರು ಆದರು.

ಬಸವಣ್ಣನವರ ಶಿನಭಕ್ತಿಯ ಕತೆ ಪ್ರಭುದೇವರ ಕಿವಿಗೂ ಬಂದು ಮುಟ್ಟಿತ್ತು. ಬಸವಣ್ಣನವರ ಮನೋಹರವಾದ ನಡತೆಯೆಂಬ ಬಿಸಿಲಿಗೆ ಜನರ ಮನಸ್ಸಿನ ಭಕ್ತಿಯೆಂಬ ತಾವರೆಗಳು ಅರಳತೊಡಗಿದುವು, ಎಂಬುದನ್ನು ಕೇಳಿ ಪ್ರಭುವಿಗೆ ತುಂಬ ಸಂತೋಷವಾಯಿತು. 'ಕಲಿಕಾಲದಲ್ಲಿ ಇಂಥ ಭಕ್ತಿ ಬೆಳೆಯುವುದು, ಇದು ಹೊಸದು. ಇದನ್ನು ಕಣ್ಣಾರೆ ಕಾಣಬೇಕು' ಎಂದು ಪ್ರಭುದೇವರು ಕಲ್ಯಾಣದ ಕಡೆಗೆ ಹೊರಟರು.

ದಾರಿಯಲ್ಲಿ ಸೊನ್ನಲಾಪುರ ಸಿಕ್ಕಿತು. ಈಗ ನಾವು 'ಷೋಲಾಪುರ್' ಅಥವಾ 'ಸೊಲ್ಲಾಪುರ' ಎನ್ನುತ್ತೇವೆಯಲ್ಲಾ, ಅದೇ ಆ ಆಗಿನ ಸೊನ್ನಲಾಪುರ. ಅಲ್ಲಿಯೂ ಒಬ್ಬ ದೊಡ್ಡ ಶಿವಭಕ್ತ, ಸಿದ್ಧರಾಮಯ್ಯ ಎಂದು ಆತನ ಹೆಸರು. ಅಲ್ಲಿ ಆತ ಒಂದು ಶಿವ ದೇವಸ್ಥಾನವನ್ನು ಕಟ್ಟಿಸಿ ಅದರ ಎದುರಿಗೆ ದೊಡ್ಡದೊಂದು ಕೆರೆ ಮಾಡಿಸುತ್ತಿದ್ದ. ಆತನ ಶಿವಭಕ್ತಿಯಲ್ಲಿ ಸೇರಿಕೊಂಡಿದ್ದ ಕೆಲವು ಕುಂದುಕೊರತೆಗಳನ್ನು ಪ್ರಭು ಕಂಡರು. ಆತನ ಮೇಲಿನ ಕರುಣೆಯಿಂದ, ನಗುನಗುತ್ತ, ಆ ಕುಂದುಕೊರತೆಗಳನ್ನು ನೀಗಿಸಿ, ಇದ್ದ ಸೊಟ್ಟುಗಳನ್ನು ತಿದ್ದಿ, ಸಿದ್ಧರಾಮಯ್ಯನನ್ನು ಶುದ್ಧಮಾಡಿದರು. ಅನಂತರ ಆತನ ಜೊತೆಯಲ್ಲಿ ಕಲ್ಯಾಣಕ್ಕೆ ಬಂದರು.

ಕಲ್ಯಾಣಕ್ಕೆ ಬಂದವರು ಅವರಿಬ್ಬರೂ ಬಸವಣ್ಣನವರ ಮಹಾಮಂದಿರದ ಚೆಲುವಾದ ಬಾಗಿಲ ಮುಂದೆ ನಿಂತರು. ಅವರನ್ನು ನೋಡಿದವರೆಲ್ಲ "ಇದೇನಿದು! ಈಶ್ವರನ ಸಗುಣ ನಿರ್ಗುಣ ಸ್ವರೂಪಗಳೇ ಆಕಾರ ತಾಳಿ ಕಣ್ಣೆದುರಿಗೆ ಬಂದಂತೆ ಇವರು ಇರುವರಲ್ಲ!" ಎಂದು ಆಶ್ಚರ್ಯಪಟ್ಟರು.

ಬಸವಣ್ಣನವರ ಮನೆಯಲ್ಲಿ ಎಲೆಯಡಿಕೆಯ ಊಳಿಗದವನು ಒಬ್ಬ ಭಕ್ತ; ಆತನ ಹೆಸರು ಹಡಪದ ಅಪ್ಪಣ್ಣ. ಆತನು ಪ್ರಭುವನ್ನೂ ಸಿದ್ಧರಾಮಯ್ಯನನ್ನೂ ಬಾಗಿಲಲ್ಲಿ

ಕಂಡು, ಬಸವಣ್ಣನವರಿಗೆ ಅದನ್ನು ತಿಳಿಸಲು ಒಳಗೆ ಓಡಿದನು. “ಅಣ್ಣನವರೆ, ಈಶ್ವರನ ದೃಶ್ಯಾದೃಶ್ಯರೂಪಗಳನ್ನು ತಾಳಿಬಂದ ಮಹಾಪುರುಷರು ಇಬ್ಬರು ಮನೆಬಾಗಿಲಿಗೆ ಬಂದಿದ್ದಾರೆ!” ಎಂದು ಸಡಗರದಿಂದ ಬಿನ್ನಹ ಮಾಡಿದನು.

ಆ ಸಮಯದಲ್ಲಿ ಬಸವಣ್ಣನವರು ತಮ್ಮ ಇಷ್ಟಲಿಂಗವನ್ನು ಕರತಳದಲ್ಲಿ ಧರಿಸಿಕೊಂಡು, ಪೂಜೆ ಮಾಡುತ್ತಿದ್ದರು. ಅಪ್ಪಣ್ಣನು ವರದಿ ಮಾಡಿದ್ದನ್ನು ಕೇಳಿ, “ನಾವು ಲಿಂಗಕ್ಕೆ ಮಾಡುವ ಪೂಜೆಯನ್ನು ಅಂಗೀಕರಿಸಿ ಜಂಗಮವೇ ಮನೆಯ ಬಾಗಿಲಿಗೆ ಬಂದದ್ದು ಬಹಳ ಲೇಸಾಯಿತು, ತುಂಬ ಒಳ್ಳೆಯದಾಯಿತು. ನನ್ನ ಒಡೆಯರನ್ನು ಒಳಗೆ ಕರೆದುಕೊಂಡು ಬನ್ನಿ. ತಡವೇಕೆ?” ಎಂದು ಹರ್ಷದಿಂದ ನೇಮಿಸಿದರು.

ಬಸವಣ್ಣನವರು ಭಕ್ತಿಯಿಂದ ಹೇಗೆ ಹೇಳಿ ಕಳಿಹಿದರೋ ಹಾಗೇ ಅಷ್ಟೇ ಭಕ್ತಿಯಿಂದ ಅಪ್ಪಣ್ಣನು ಬಂದು, ಪ್ರಭುವಿಗೂ ಸಿದ್ಧರಾಮಯ್ಯನಿಗೂ ಕೈಮುಗಿದು, ಶರಣಾರ್ಥಿಮಾಡಿ, ಒಳಗೆ ಬಿಜಯಮಾಡಿಸಬೇಕೆಂದು ಬೇಡಿಕೊಂಡನು.

“ಒಳಗಡೆ ನಮಗೇನು ಅಂತಹ ರಾಜಕಾರ್ಯ? ಅರಸುಗಳ ಮನೆಯಲ್ಲಿ ಆಗಬೇಕಾದ ಸಂಚಾರ ನಮಗೆ ಏಕೆ?” ಎಂದು ಅಲ್ಲಮಪ್ರಭು ಆಡಲು; ಅಪ್ಪಣ್ಣನು ಆ ಮಾತನ್ನು ಗ್ರಹಿಸಿ, ಕೂಡಲೆ ಹೋಗಿ ಬಸವಣ್ಣನವರಿಗೆ ತಿಳಿಸಿದನು.

ಬಸವಣ್ಣನವರು ಆ ಮಾತು ಕೇಳಿ ಕಂಪಿಸಿ ಕರಗಿಹೋದರು. “ಹರಹರಾ! ನಾನು ಎಂತಹ ಗರ್ವದ ಗಿರಿಯನ್ನು ಏರಿ ಹತ್ತಿ ಕುಳಿತೆ? ದುರುಳತನದಿಂದ ನನ್ನ ನುಡಿಯಲ್ಲಿ, ನನ್ನ ನಡೆಯಲ್ಲಿ ಎಂಥ ತಪ್ಪಾಯಿತು? ನನಗೆ ಗುರುವಾದ ಜಂಗಮವು ಮನೆಬಾಗಿಲಿಗೆ ತಾನಾಗಿಯೇ ಬಂದರೂ, ಕರೆದಾಗ ಒಳಕ್ಕೆ ಬಾರದೆ ತಡೆದು ನಿಂತದ್ದೇಕೆ?” ಎಂದು ಚಿಂತೆಗೀಡಾದರು.

ಆಗ, ಅಲ್ಲಿ ಮಡಿವಾಳ ಮಾಚಯ್ಯ ಎಂಬೊಬ್ಬ ಶಿವಭಕ್ತ; ಆತ ಬಟ್ಟೆಗಳನ್ನು ಒಗೆದುಕೊಡುವ ಅಗಸರ ವೃತ್ತಿಯಿಂದ ಅರ್ಥ ಸಂಪಾದನೆಮಾಡಿ, ಆ ಅರ್ಥವನ್ನು

ಜಂಗಮರ ಸೇವೆಗೆ ಸವೆಸುತ್ತಿದ್ದವನು. ಆತ ಹೇಳಿದ: “ಭಕ್ತರ ಮನಸ್ಸಿನ ನೆಲೆಯನ್ನು ನೋಡೋಣವೆಂದು ಗುರು ತಾನೇ ಕರುಣೆಯಿಂದ ಮನೆಬಾಗಿಲಿಗೆ ಬಂದರೆ, ಆತನನ್ನು ಸತ್ಕರಿಸುವ ರೀತಿ ತಿಳಿಯದೆ, ಈ ರಾಜಸದ ಅಹಮ್ಮಿನಿಂದ 'ಒಳಗೆ ಬಾ' ಎಂದು ಹೇಳಿಕಳಿಸುವುದು ನಿನಗೆ ಉಚಿತವೆ, ಬಸವಣ್ಣ?”

ಆಗ ಬಸವಣ್ಣನವರು ಎಚ್ಚತ್ತರು. “ಸಮುದ್ರದಲ್ಲಿ ಈಜಾಡುವವನಿಗೆ ಕತ್ತಲೆ ಕವಿದುಕೊಂಡ ಹಾಗೆ ಆಯಿತು, ನನ್ನ ಸ್ಥಿತಿ. ಮಡಿವಾಳಯ್ಯನ ಮಾತು ತಪ್ಪಲ್ಲ, ದಿಟ.” ಎಂದು ಸಮಸ್ತ ಶಿವಗಣದ ಜೊತೆಯಲ್ಲಿ ಎದ್ದು ಹೊರಟು, ಹೊರಗೆ ಬಂದು, ಅತಿ ಭಯಭಕ್ತಿಯಿಂದ ತಮ್ಮ ದೇಹವನ್ನು ಪ್ರಭುವಿನ ಪಾದಗಳಲ್ಲಿ ಈಡಾಡಿದರು.

“ಪ್ರಭುವೆ! ನಾನು ತಿಳಿಯದ ಹುಚ್ಚ, ತಾವು ಎಲ್ಲ ತಿಳಿದವರು. ನಾನು ಇತರರನ್ನು ಮೆಚ್ಚಿಸುವವನು, ತಾವು ಯಾರ ಮೆಚ್ಚಿಕೆಯನ್ನೂ ಬಯಸದವರು. ನಾನು ಪಶು ತಾವು ಪಶುಪತಿ. ನನ್ನ ತಪ್ಪನ್ನು ತಾವೇ ತಿದ್ದಬೇಕು” ಎಂದು ಮತ್ತೆ ಅಡ್ಡಬಿದ್ದು, “ನನ್ನ ಮದದಿಂದ ನನ್ನ ಬುದ್ಧಿ ಕೆಟ್ಟಿತು. ನನ್ನನ್ನು ಕ್ಷಮಿಸಬೇಕು. ಒಡೆಯರಾದವರು ನನ್ನ ಗುಣದಲ್ಲಿನ ಕೊರತೆಗಳನ್ನು ಗಮನಿಸಬಾರದು.” ಎಂದು ಪುನಃಪುನಃ ಶುದ್ಧವಾದ ಬುದ್ಧಿಯಿಂದ, ಭಯಭಕ್ತಿ ಸಹಿತವಾಗಿ, ಬಸವಣ್ಣನವರು ಪ್ರಭುವಿಗೆ ಸಾಷ್ಟಾಂಗ ಎರಗಿದರು.

ಅಲ್ಲಿಯೇ ಇದ್ದವನು ಚೆನ್ನಬಸವಣ್ಣ ತಾನೂ ಪ್ರಭುವಿನ ಬಳಿ ಬೇಡಿದನು. ಆತ ಬಸವಣ್ಣನವರ ಸೋದರಳಿಯ. ಮಹಾ ಶಿವಜ್ಞಾನಿ. “ಪ್ರಭುವೆ! ಮಕ್ಕಳಲ್ಲಿ ಏನಾದರೂ ಗುಣದೋಷವಿದ್ದರೆ ಮೋಹದ ತಾಯಿತಂದೆ ಅವರನ್ನು ಕರುಣೆಯಿಂದ ರಕ್ಷಿಸುವುದಿಲ್ಲವೇ! ಅದರಂತೆಯೇ ಬಸವರಾಜನಿಗೆ ತಾಯಿಯೂ ತಂದೆಯೂ ಆದ ನೀವೇ ಇವನನ್ನು ಕರುಣೆಯಿಂದ ಕಾಪಾಡಿಕೊಡಬೇಕು.” ಎಂದು ವಂದಿಸಿದನು.

ಮಡಿವಾಳ ಮಾಚಯ್ಯ ತಾನೂ ವಿಜ್ಞಾಪನೆ ಮಾಡಿದನು. "ಯುದ್ಧ ಭೂಮಿಯಲ್ಲಿ ಶತ್ರುಗಳ ಎದುರಿನಲ್ಲಿ ಮೈಮರೆತು ತಪ್ಪಿದರೆ, ಅದರಿಂದ ತುಂಬಾ ಅಪಾಯ, ಆದರೆ ಗರುಡಿಯ ಸಾಧನೆಯಲ್ಲಿ ಕೈಮರೆತು ಆಡಿದರೆ, ಏನೂ ಅಂಥ ಕೊರತೆಯೆನಿಸದು. ಆದ್ದರಿಂದ, ಗುರುವೆ, ಈ ಬಾಲಾಭ್ಯಾಸದ ಭಕ್ತಿಯ ಪರಿಚರ್ಯೆಯಲ್ಲಿ ಕಾಣುವ ಕುಂದನ್ನು ನೋಡದೆ ಕರುಣಿಸಬೇಕು" ಎಂದನು.

ಪ್ರಭು ಅವರ ಮಾತುಗಳನ್ನೆಲ್ಲ ಕೇಳಿದರು. ನಸುನಗುತ್ತ ಸಿದ್ಧರಾಮಯ್ಯನ ಕಡೆಗೆ ತಿರುಗಿ "ನೋಡಿದೆಯ, ರಾಮಯ್ಯ? ಭಕ್ತರು ತಾವು ಮಾಡುವುದು ಒಂದು ಆಡುವುದು ಬೇರೊಂದು. ಜಂಗಮ ಒಲಿದು ಬಂದರೆ, ತಾವು ಮಾಡುವುದು ಮಾಡಿಬಿಟ್ಟು, ಈಗ ಹೊಗಳಿ ಹಾಡಿ ಜೋಡಿಸುವುದನ್ನು ನೋಡು!" ಎಂದರು.

ಅದಕ್ಕೆ ಸಿದ್ಧರಾಮಯ್ಯ "ಭಕ್ತರನ್ನು ಸಲಹಬೇಕೆಂದೇ ನೀನು ಹೀಗೆ ಉದ್ದೇಶಿಸಿ ಸುಲಭನಾಗಿ ನಡೆತಂದಿರುವಾಗ, ಅವರ ನಡತೆಯಲ್ಲೂ ಅವರ ಬುದ್ಧಿ ಯಲ್ಲೂ ಕೊರತೆ ಕಂಡುಬಂದರೆ, ಅದನ್ನು ಏಕೆ ಎಣಿಸಬೇಕು? ಕರುಣೆಯಿಂದ ಬಂದವನು ಅವರನ್ನು ಕರುಣೆಯಿಂದ ಕಾಪಾಡಬೇಕು?" ಎಂದು ಸಲುಗೆಯಿಂದ ವಿಜ್ಞಾಪನೆ ಮಾಡಿದನು.

"ಅಡ್ಡಿಗಳು ಯಾವುದನ್ನೂ ನೋಡದೆ ನೀನಾಗಿಯೇ ಬಿಜಯ ಮಾಡಿದವನು ಈಗ ಅಡ್ಡಿಗಳಾದರೂ ಅವನ್ನು ಗಮನಿಸದೆ ಕ್ಷಮಿಸಿ ನಮ್ಮನ್ನು ಸಲಹಿಕೊಳ್ಳಬೇಕು" ಎಂದು ಚೆನ್ನಬಸವ, ಹಿರಿಯ ಬಸವ, ಇತರ ದೊಡ್ಡ ದೊಡ್ಡ ಶಿವಭಕ್ತರು ಒಬ್ಬೊಬ್ಬರೂ ತಾವು ತಾವು ಬೇಡಿಕೊಳ್ಳುತಿದ್ದರು. ಪ್ರಭುದೇವರು ಅದನ್ನೆಲ್ಲ ಕೇಳಿ, "ನಿಮ್ಮ ನಡೆವಳಿ ಏನೇ ಆದರೂ ನುಡಿವಳಿಗಳಲ್ಲಿ ಮಾತ್ರ ಒಬ್ಬೊಬ್ಬರೂ ಅತಿಜಾಣರಾಗಿದ್ದೀರಿ. ಜಗತ್ತಿನಲ್ಲಿ ಶಿವಭಕ್ತರೆಂದರೆ ನೀವೀಗ ಶಿವಭಕ್ತರು! ಬಲು ಚೆನ್ನಾಗಿದೆ! ನಡೆಯಿರಿ, ಒಳಕ್ಕೆ. ಶಿವಲಿಂಗಭಕ್ತಿಯ ಬೆಡಗನ್ನು ನಿಮಗೆ ಏಕಾಂತದಲ್ಲಿ ಮನಸ್ಸಿಗೆ ಅಂಟುವ ಹಾಗೆ ಹೇಳುತ್ತೇನೆ" ಎಂದು ಅವರೆಲ್ಲರೊಡನೆ ಬಸವರಾಜರ ಮಂದಿರವನ್ನು ಒಳಹೊಕ್ಕರು.

ಅಲ್ಲಿ ಒಂದು ಕಡೆ ಮಹಾಪ್ರಸಾದದ ಕುಂಡ. ಅದರ ದಡದಲ್ಲಿ ಮರುಳಶಂಕರನೆಂಬ ಶಿವಭಕ್ತ ಕುಳಿತಿದ್ದ. ಈ ಪ್ರಸಾದದ ರಕ್ಷೆಯಿಂದಲೇ ತನಗೆ ಮುಕ್ತಿ, ಎಂದು ನಂಬಿದ್ದವನು ಆತ. ಹಗಲು ರಾತ್ರಿ ಎನ್ನದೆ ಆ ಪ್ರಸಾದವನ್ನು ಸೇವೆಮಾಡುತ್ತಿದ್ದ ಆತನನ್ನು ಪ್ರಭು ನೋಡಿದರು. “ಎಲ ಎಲಾ! ಕಲ್ಲಿನ ಮರೆಯಲ್ಲಿ ಚಿನ್ನವೂ ಎಳ್ಳಿನ ಮರೆಯಲ್ಲಿ ಎಣ್ಣೆಯೂ ಭೂಮಿಯ ಮರೆಯಲ್ಲಿ ಮಹಾನಿಧಿಯೂ ಇರುವ ಹಾಗೆ ಹುಚ್ಚನ ವೇಷದಲ್ಲಿ ಈ ಶಂಕರದೇವನು ಇಲ್ಲಿದ್ದಾನೆ. ತನ್ನ ಬಳಿಯಲ್ಲೇ, ತನ್ನ ಅಂಗಳದಲ್ಲೇ ಸಾಕಾರ ಶಂಕರನು ಬಂದು ನೆಲಸಿರುವಾಗ, ಬಸವಣ್ಣನಿಗೆ ಈತನ ಗುರುತೇ ಗೊತ್ತಾಗಿಲ್ಲವಲ್ಲ!” ಎಂದು ಪ್ರಭು ಆಶ್ಚರ್ಯಪಟ್ಟರು. “ಸಾಕ್ಷಾತ್ ಶಂಕರನೇ ಪ್ರೇಮದಿಂದ ಮರುಳುಶಂಕರನೆಂದು ಹೆಸರಿಟ್ಟುಕೊಂಡು ಬಂದರೆ, ಈ ಲೋಕದವರು ಆತನನ್ನು ತಿಳಿಯರು. ಆಡಂಬರದ ಭಕ್ತಿಯನ್ನು ಇವರು ಗುರುತಿಸಬಲ್ಲವರೇ ಹೊರತು, ಸಾತ್ತ್ವಿಕವಾದ ಸೌಮ್ಯಭಕ್ತಿಯನ್ನು ಇವರು ತಿಳಿಯಲಾರರು. ನೋಡಿದೆಯ ರಾಮಯ್ಯ?” ಎಂದರು, ಪ್ರಭು. “ಈತನೇ ಜ್ಞಾನದ ತಿರುಳು, ಲಿಂಗಾಗಮದ ಹುರುಳು ನಡತೆಯನ್ನು ಈತನಿಂದ ನೋಡಿ ಕಲಿಯಬೇಕು, ಸದಾ ಶಾಂತಿಯ ಚಿತ್ತವೃತ್ತಿ, ಪರಮಪಾವನವಾದ ಮೂರ್ತಿ; ಈತನ ರೀತಿ ಅನುಪಮವಾದದ್ದು ರಾಮಯ್ಯ” ಎಂದು ಪ್ರಭು, ಆತನನ್ನು ಬಹುವಾಗಿ ಮೆಚ್ಚಿಕೊಂಡು, ಕರುಣೆಯಿಂದ ಆತನಿಗೆ ಐಕ್ಯಪದವಿಯನ್ನು ಅನುಗ್ರಹಿಸಿಕೊಟ್ಟರು.

ಅನಂತರ ಪ್ರಭು ಬಸವೇಶ್ವರರೊಡನೆ ಒಂದು ಒಳಮನೆಗೆ ಹೋದರು. ಅಲ್ಲಿ ರತ್ನಗಳನ್ನು ಮೆಟ್ಟಿದ್ದ ಒಂದು ಸ್ಪರ್ಶಶಿಲೆಯ ಪೀಠದ ಮೇಲೆ ಬಸವಣ್ಣನವರು ತನ್ನ ಗುರುವನ್ನು ಬಿಜಯಮಾಡಿಸಿ, ಕೈಮುಗಿದು, ತಲೆಬಾಗಿ ಹೀಗೆ ವಿಜ್ಞಾಪಿಸಿಕೊಂಡರು: “ಶಿವಭಕ್ತಿ ಎಂಬುದು ಕುರುಡ ಕನ್ನಡಿ ಹಿಡಿದ ಹಾಗೆ, ಹುಚ್ಚ ಕಂಡ ಕನಸಿನ ಹಾಗೆ, ಮಾತಿಗೆ ಮೀರಿದ್ದಾಗಿದೆ ಇದನ್ನು ನಾವು ತಿಳಿಯುವ ಹಾಗೆ ನೀನು ವಿಸ್ತರಿಸಿ ನಮಗೆ ಹೇಳಬೇಕು, ಗುರುವೆ.”

ಅದಕ್ಕೆ ಪ್ರಭುದೇವರು ಹೇಳಿದರು: "ಬಹಳ ಮೇಲಾದ ಪ್ರಶ್ನೆ ಕೇಳಿದೆ, ಬಸವಣ್ಣ, ಈ ಲೋಕದಲ್ಲಿ ಶಿವತತ್ತ್ವದ ಸಾರವನ್ನು ಪೂರಣಮಾಡಲಿಕ್ಕಾಗಿ ಅವತಾರಮಾಡಿದ ಕಾರಣಪುರುಷ ನೀನು. ಸೂರ್ಯನಿಗೆ ದಾರಿಯನ್ನು ತೋರಿಸಲು ದೀವಿಗೆಯನ್ನು ತರಬೇಕೆ? ಅಥವಾ, ಅಗ್ನಿಯ ಹಸಿವಿಗೆ ಅಡಿಗೆಮಾಡಿ ಕೊಡಬೇಕೆ? ಅದರಂತೆಯೇ ದೈವಪುರುಷನಾದ ನಿನಗೆ ಬೇರೆಯಾದ ಬೋಧೆಗಳಿಂದ ಏನು ತಾನೆ ಪ್ರಯೋಜನ, ಬಸವಣ್ಣ!"

ಬಸವಣ್ಣನವರಿಗೆ ಈ ಮೊದಲೇ ಗರ್ವ ಕೊಂಚ ಕರಗಿತ್ತು. ಗುರುವಿನ ಹೊಗಳಿಕೆಯನ್ನು ಕೇಳಿ, ಅವರೆಂದರು: "ಹರಹರಾ! ನಾ ಯಾರು? ನಿಮ್ಮ ಚರಣದ ಶರಣರಿಗೆ ಶರಣನಲ್ಲವೆ? ಕಿಂಕರರ ಕಿಂಕರನಲ್ಲವೆ? ನನಗೆ ಇಷ್ಟು ಗೌರವದ ಭಾರವನ್ನು ಹೊರಿಸಿದರೆ, ನಾನು ಹೇಗೆ ಹೊರಲಿ? ಬಿತ್ತಿ ಬೆಳೆಯಾಗುವ ಮೊದಲೇ ಆ ಮೊಳಕೆಯನ್ನು ಕಿತ್ತು ನೋಡುವಂತೆ ಎಳೆಯನಾದ ನನ್ನನ್ನು ಏಕೆ ವೃಥಾ ಹೊಗಳುವಿರಿ? ಗುರುವೆ, ಮನಸ್ಸುಮಾಡಿ, ನನ್ನ ಮನಸ್ಸಿನ ಮಧ್ಯದ ಕತ್ತಲೆಯನ್ನು ಕಳೆಯುವಂಥ ಜ್ಞಾನಸೂರ್ಯನನ್ನು ನನಗೆ ಅನುಗ್ರಹಿಸು."

ಅದಕ್ಕೆ ಪ್ರಭುದೇವರು "ಅಮೃತದ ಅನುಪಮವಾದ ರುಚಿ ಕಂಡವರು ಬೇರೆ ಒಂದು ರುಚಿಗೆ ಬಯಸುವರೆ, ಬಸವಣ್ಣ? ಆದರೂ ನೀನು ಕೇಳಿದ ಮೇಲೆ ನಾವು ಹೇಳದೆ ಇರಬಾರದು. ನಿರಹಂಕಾರಿಯಾದ ನೀನು ಲಿಂಗದ ಮಹಾ ಅನುಭವದ ಐಕ್ಯಸುಖವನ್ನು ಅರಿಯದಿದ್ದರೆ ಮತ್ತಾರು ಅರಿವನರು?" ಎಂದು ಹೇಳಿ, ಬಸವಣ್ಣನವರಿಗೆ ಇಷ್ಟಲಿಂಗವನ್ನು ಕುರಿತು ಹೀಗೆ ಉಪದೇಶಮಾಡಿದರು:

"ಕೇಳು, ಬಸವಣ್ಣ: ಮನುಷ್ಯನಾಗಿ ಹುಟ್ಟಿದರೂ ತನ್ನ ಮೈಯನ್ನೂ ಮನಸ್ಸನ್ನೂ ಗಟ್ಟಿಯಾಗಿರಿಸಿಕೊಳ್ಳಬೇಕು. ಬುದ್ಧಿಯನ್ನು ಕೆಟ್ಟ ದಾರಿಗೆ ಬಿಡಬಾರದು. ಆದಷ್ಟು ಬೇಗ ಈ ಮನುಷ್ಯ ದೇಹದಿಂದ ಮುಕ್ತಿ ಪಡೆಯಬೇಕೆಂಬುದನ್ನು ಮರೆಯದೆ ಇರಬೇಕು. ಹಾಲು ಕೊಡುವ ಹಸು ಇರುವಾಗಲೇ ಹಬ್ಬ ಮಾಡಿಕೊಂಡು ಸಂತೋಷಪಡಬೇಕು;

ಗಾಳಿಬೀಸುವ ದಿನದಲ್ಲೇ ಹೊಟ್ಟುಗಳನ್ನು ತೂರಿಬಿಡಬೇಕು ; ಅದರಂತೆ, ಕೈ ಕಾಲು ಕಣ್ಣು ಪಟುವಾಗಿರುವಾಗಲೇ ಮೃತ್ಯುವನ್ನು ನಿವಾರಿಸಿ, ಮೇಲುಗತಿಯನ್ನು ಹುಡುಕಬೇಕು. ಇದೇ ನಿಜವಾದ ಜಾಣತನ, ಆದ್ದರಿಂದ ಶಿವಾಗಮದ ದಾರಿಯನ್ನು ತಿಳಿದು ಸನ್ಮಾರ್ಗದಲ್ಲಿ ಬುದ್ಧಿಯಿರಿಸಿ, ಗುರುವಿನ ಕರುಣೆಯನ್ನು ಸಂಪಾದಿಸಿ, 'ಇದು ನನ್ನ ತನು, ಇದು ನನ್ನ ಮನ, ಇದು ನನ್ನ ಧನ' ಎಂಬ ಮದ ಮೋಹಗಳನ್ನು ಕೆದರಿ ಕೆಡಿಸಬೇಕು. ಇದು ನಿಜವಾದ ಜಾಣತನ. ನಿನ್ನ ತನುವನ್ನು ಇಷ್ಟಗುರುವಿಗೆ ಸಲ್ಲಿಸಬೇಕು, ನಿನ್ನ ಮನವನ್ನು ಇಷ್ಟ ಲಿಂಗಕ್ಕೆ ಸಲ್ಲಿಸಬೇಕು, ನಿನ್ನ ಧನವನ್ನು ಇಷ್ಟ ಜಂಗಮಕ್ಕೆ ಸಲ್ಲಿಸಬೇಕು. ಇವುಗಳಲ್ಲಿ ಮನಸ್ಸನ್ನು ಇಷ್ಟಲಿಂಗಕ್ಕೆ ಸಲ್ಲಿಸುವುದರಿಂದ ಸರ್ವಸಂಗವನ್ನೂ ತ್ಯಾಗಮಾಡುವುದು ಸುಲಭವಾಗುತ್ತದೆ, ಮಾಯೆಯ ನಿವಾರಣೆಯಾಗುತ್ತದೆ, ಹೃದಯದೊಳಗಿರುವ ಪ್ರಾಣಲಿಂಗದ ಪರಿಚಯವಾಗುತ್ತದೆ. ಸಚ್ಚಿದಾನಂದವನ್ನು ಸಾಕ್ಷಾತ್ಕರಿಸಿಕೊಳ್ಳಲು ಸಹಾಯವಾಗುತ್ತದೆ. ಇಂತಹ ಶಿವಮಾರ್ಗವನ್ನು ಕುರಿತು ಕೇಳಿದರೆ ಸಾಲದು, ಇದನ್ನು ತಿಳಿದರೆ ಮಾತ್ರ ಸಾಲದು, ಇದನ್ನು ಅಭ್ಯಾಸಕ್ಕೆ ತಂದೇ ತೀರಬೇಕು. ತನ್ನ ಮೈಯ ಮೇಲೂ ಮನಸ್ಸಿನ ಮೇಲೂ ಧನದ ಮೇಲೂ ಆಸೆ ಇಂಗದಿದ್ದರೆ, ಅವನು ಏನು ವಿಭೂತಿ ಹಚ್ಚಿಕೊಂಡರೂ, ಏನು ಲಿಂಗ ರುದ್ರಾಕ್ಷಿ ಧರಿಸಿಕೊಂಡರೂ, ಅದೆಲ್ಲ ವ್ಯರ್ಥ."

ಬಸವೇಶ್ವರರಿಗೆ ಹಮ್ಮು ಇನ್ನೂ ಪೂರ್ತ ಹೋಗಿರಲಿಲ್ಲ. ಗುರುವಿನ ಉಪದೇಶವನ್ನು ಕೇಳಿ, ಮೈಮರೆತು, ಅವರೆಂದರು: "ಒಂದು ಬರೆ ಚಿನ್ನವನ್ನಾಗಲಿ ಒಂದು ಎಳೆ ವಸ್ತ್ರವನ್ನಾಗಲಿ ಒಂದು ಕಾಳು ಧಾನ್ಯವನ್ನಾಗಲಿ 'ಇದು ನನ್ನವರಿಗೆ ಇರಲಿ' ಎಂದು ಇರಿಸಿಕೊಂಡು, ಬಂದ ಜಂಗಮಕ್ಕೆ ಇಲ್ಲವೆಂದು ಕೈಯಾಡಿಸಿದೆನಾದರೆ, ನಿಮ್ಮ ಪಾದಕ್ಕೆ ನಾನು ದೂರ ಆದೇನು!"

ಪ್ರಭುದೇವರೆಂದರು: "ಚಿನ್ನದ ಬೆಟ್ಟ, ಬೆಳ್ಳಿಯ ಬೆಟ್ಟ, ಹಾಲಿನ ಕಡಲು, ಕಲ್ಪವೃಕ್ಷ, ಕಾಮಧೇನು, ಅಸಮಾನವಾದ ಅಷ್ಟಮಹದೈಶ್ವರ್ಯ ಮುಂತಾದ್ದನ್ನೆಲ್ಲಾ

ಉಳ್ಳವನು ಶಿವಲಿಂಗ, ಉಳ್ಳ ವರು ಪ್ರಮಥರು. ಮರುಳು ಬಸವಾ, ನಿನಗೆ ಇವೆಲ್ಲ ಎಲ್ಲಿಂದ ಬಂದಾವು! ನೀನು ಅವರಿಗೆ ಏನುತಾನೆ ಕೊಟ್ಟೀಯೆ!"

ಬಸವಣ್ಣನವರು ಮತ್ತೆಯೂ ಮೈವೆರೆತು ಹೇಳಿದರು: "ನನ್ನ ಭಾಗದ ದೇವರು ಯಾವ ಯಾವ ರೀತಿಯಲ್ಲಿ ಯಾವ ಯಾವ ಮುಖದಲ್ಲಿ ಬಂದು ಬೇಡಿದರೂ ನನ್ನ ತನು ಮನ ಧನಗಳನ್ನು ಅವರು ದಣಿಯುವಂತೆ ನಾನು ಕೊಟ್ಟು ಸಲ್ಲಿಸುವೆನು. ಈ ಮಾತಿಗೆ ನಾನು ತಪ್ಪಿದೆನಾದರೆ, ನಿಮ್ಮ ಶ್ರೀಪಾದಸೇವೆಗೆ ನಾನು ತಪ್ಪಿದವನಾದೇನು!"

ಅದಕ್ಕೆ ಪ್ರಭು ಹೇಳಿದರು: "ನನ್ನ ತನುವನ್ನು ಕೊಟ್ಟೆ, ನನ್ನ ಮನವನ್ನು ಕೊಟ್ಟೆ, ನನ್ನ ಧನವನ್ನು ಕೊಟ್ಟೆ—ಎಂದು ಈ ಕೀಳು ಬಿಂಕವನ್ನು ಆಡುವೆಯಲ್ಲಾ; ಈ ತನು ಮನ ಧನಗಳನ್ನು ನಿನಗೆ ಕೊಟ್ಟವರು ಯಾರು? ಮತ್ತೆ ನೀನು ಎಂಬುದು ಯಾರು? ಇದನ್ನು ತಿಳಿಯದೆ, ಹೀಗೆ ವ್ಯರ್ಥವಾಗಿ ಮಾತನಾಡುವುದು ನಿನಗೆ ಉಚಿತವೆ, ಬಸವದಂಡಾಧೀಶ?"

ಬಸವಣ್ಣನವರು ತಮ್ಮ ತಪ್ಪು ತಾವು ತಿಳಿದರು. ಮರು ಮಾತಾಡಲಿಲ್ಲ.

"ಆದ ಕಾರಣದಿಂದ, ಬಸವ, ಅಧಮವಾದ ಹಮ್ಮಿನ ಭ್ರಾಂತಿಯನ್ನು ನಾಶಮಾಡಬೇಕು; ಅಹಂಕಾರದ ಲವಲೇಶವೂ ಲೇಪವಿಲ್ಲದ ಭಕ್ತಿಯನ್ನು ಬೆಳಸಬೇಕು. ಇದು ಆಗಬೇಕಾದರೆ ನಿನ್ನ ಮುಂದೆ ಕಾಣಿಸುವ ಇಷ್ಟಲಿಂಗವನ್ನು ನೀನು ಚಿರಕಾಲವೂ ಕುರಿತು ಚಿಂತಿಸಬೇಕು. ಈ ಇಷ್ಟಲಿಂಗವೇ ನಿನ್ನ ಇಷ್ಟಾರ್ಥಗಳನ್ನು ಈಡೇರಿಸುವ ಚಿಂತಾಮಣಿ. ಕೇಳು ಬಸವಣ್ಣ; ಮೊದಲು ಅಭ್ಯಾಸ ಮಾಡುವಾಗ ಕೈಯಲ್ಲಿ ಕೋಲನ್ನು ಹಿಡಿದು, ಅನಂತರ ರಣರಂಗದಲ್ಲಿ ಮಸೆದ ಕತ್ತಿಯನ್ನು ಹಿಡಿದು ಶತ್ರುಗಳನ್ನು ಸೋಲಿಸುವ ಹಾಗೆ ಇಷ್ಟಲಿಂಗವನ್ನು ಚಿರಕಾಲವೂ ಚಿಂತಿಸುವ ಅಭ್ಯಾಸವಿಲ್ಲದೆ ಉತ್ತಮ ಗತಿ ಆಗದು. ಹೇಳುವುದಾದರೆ, ಶಿವಭಕ್ತಿ ಎಂಬುದು ಸಾಮಾನ್ಯವಲ್ಲ." ಎಂದು ಪ್ರಭು ಈ ಪ್ರಕಾರವಾಗಿ ಇಷ್ಟಲಿಂಗದ ಪ್ರೀತಿಯ

ಮಾರ್ಗಾಚಾರವನ್ನು ಬಸವಣ್ಣನವರೇ ಮೊದಲಾದ ಸಮಸ್ತ ಭಕ್ತರಿಗೂ ಪ್ರೀತಿಯಿಂದ ತಿಳಿಸಿದರು. ಅವರೆಲ್ಲ ಅದನ್ನು ಅನುಸರಿಸಿ ನಡೆಯುತ್ತಿದ್ದರು.

ಹೀಗೆಯೇ ಸ್ವಲ್ಪ ಕಾಲವಾದ ಮೇಲೆ, ಒಂದು ದಿನ ಪ್ರಭುದೇವರು ಮತ್ತೆ ಬಸವಣ್ಣನವರನ್ನು ಕುರಿತು ಹೇಳಿದರು: "ಬಸವಣ್ಣ, ಲಿಂಗದ ಪೂಜೆಗಾಗಿ ಹೂ ಪತ್ರೆ ತರುವುದು, ಅಭಿಷೇಕಕ್ಕಾಗಿ ನೀರು ತರುವುದು, ಪ್ರಸಾದಕ್ಕಾಗಿ ಹಣ್ಣುಹಂಪಲು ತರುವುದು—ಇಂಥ ಬಾಹ್ಯಭಕ್ತಿಯವರನ್ನು ಕಂಡರೆ ನನಗೆ ಅಷ್ಟಾಗಿ ಇಷ್ಟವಿಲ್ಲ. ಹೂ ಪತ್ರೆ ತರುವಾಗ ಗಿಡ ನಡುಗುತ್ತದೆ, ನೀರು ತರುವಾಗ ಮಡು ಕಲಕುತ್ತದೆ, ಹಣ್ಣುಹಂಪಲನ್ನು ಕಡಿದು ತರುತ್ತಾರೆ; ಹೀಗೆ, ತನ್ನ ದೇಹಕ್ಕೆ ಏನೂ ಗಾಸಿಯಾಗದಂತೆ ಇತರರನ್ನು ಕೆಡಿಸುವ ಭಕ್ತಿ ಭಕ್ತಿಯಲ್ಲ. ಈ ದೇಹಕ್ಕೆ ಈ ಪ್ರಾಣ ಅಂಟಿಕೊಂಡಿದೆಯೆಲ್ಲಾ—ಇದನ್ನು ಉಸಿರೆಂಬ ಗರಗಸದಿಂದ ಬೇರೆ ಮಾಡಿ, ಆ ಬೆಸುಗೆಯನ್ನು ಬಿಡಿಸಬೇಕು. ಇದು ಬಹು ಕಷ್ಟ. ಇದರ ಸೂಕ್ಷ್ಮವನ್ನು ತಿಳಿಯಬೇಕಾದರೆ ನಮ್ಮ ಸಿದ್ಧರಾಮಯ್ಯನನ್ನು ನೆನೆಯಬೇಕು, ಬಸವಣ್ಣ."

ಅದಕ್ಕೆ ನಿರಹಂಕಾರಿಯಾದ ಸಿದ್ಧರಾಮಯ್ಯ ಹೇಳಿದರು: "ದೇವ ದೇವ! ಏನು ಹೇಳಿದಿರಿ? ನಿಮ್ಮ ಕಿಂಕರರಲ್ಲಿ ನಾನು ಯಾರಿಗೆ ಸಮನಾದೇನು? ನೀವು ಮನ್ನಿಸಿದರೆ, ಅತ್ಯಂತ ಅಧಮನಾದವನು ಕೂಡ ಪರಮಪಾವನನಾಗುವನು. ಆದರೂ ಪರಮ ಪೂರ್ವಾಚಾರ್ಯನಾದ ಈ ಬಸವೇಶ್ವರನ, ಘನ ಗುರುವಾದ ಈ ಚೆನ್ನಬಸವನು, ನಿರುಪಮಜ್ಞಾನೈಕನಿಧಿಯಾದ ಪ ಮಡಿವಾಳ ಮಾಚಯ್ಯನು—ಇವರಂಥ ಶ್ರೇಷ್ಠರಾದ ಶರಣರ ಸಮೂಹದಲ್ಲಿ ನಾನು ಯಾವ ಗಣನೆಗೆ ಲೆಕ್ಕ?"

ಪ್ರಭು ಆ ಮಾತು ಮೆಚ್ಚಿದರು. "ನೀನು ಹೇಳಿದ್ದು ಸತ್ಯ, ಸಿದ್ಧರಾಮಯ್ಯ, ಭಕ್ತರು ಉಪಮಾತೀತರು, ಒಬ್ಬರಿಗೆ ಒಬ್ಬರನ್ನು ಹೋಲಿಸುವುದು ಆಗದು. ಬಸವ, ಮಡಿವಾಳ,

ಚೆನ್ನಬಸವ ಇವರು ನಾವು ಕಂಡಂತೆ ಲೋಕಖ್ಯಾತರಾದ ಪುರುಷರು ಸತ್ಯ." ಎಂದು ಹೊಗಳುತ್ತಾ, "ಬಸವರಾಜ! ನೀನು ಆದಿಪುರುಷ, ನೀನು ಅನಾದಿಪುರುಷ, ನೀನು ಓಂಕಾರಸ್ವರೂಪಿ, ನಿನ್ನ ಮಹಿಮೆಯನ್ನು ವೇದಶಾಸ್ತ್ರಗಳು ಕೂಡ ಸಾಧಿಸಿ ಅರಿಯವು. ಆದರೂ, ಕೇಳು: ಭಕ್ತಿಯ ದಾರಿಗೆ ಒಂದೇ ಒಂದು ಗುರಿ. ಈ ದೇಹವನ್ನು ಲಿಂಗವೆಂದೇ ಭಾವಿಸಿಕೊಂಡು ಇದನ್ನು ರಕ್ಷಿಸಿಕೊಳ್ಳುತ್ತ, ಮೈಮರೆಯದೆ ಸಮಾಧಿಯನ್ನು ಸಾಧಿಸಬೇಕು. ಅನುಶ್ರವಣ ಮನನ ನಿಧಿಧ್ಯಾಸನಗಳಿಂದ ತನ್ನ ಮನೋವಾಕ್ಕಾಯ ಕರ್ಮಗಳನ್ನು ಒಂದು ಹುರಿಯಾಗಿ ಮಾಡಿ, ಎಚ್ಚರವಾಗಿರುವವನಿಗೆ ಅಸಾಧ್ಯವಾದದ್ದು ಯಾವುದೂ ಇಲ್ಲ. ಮತ್ತೆಯೂ ಕೇಳು, ಬಸವಣ್ಣ: ಗುರು ಲಿಂಗ ಜಂಗಮ ಎಂಬುದು ಹೊರಗಿಲ್ಲ, ಅದು ತನ್ನೊಳಗೆ; ಪಾದೋದಕದ ಅಮೃತ ಎಂಬುದು ಹೊರಗಿಲ್ಲ, ಅದು ತನ್ನೊಳಗೆ; ಪರಮಪ್ರಸಾದ ಮುಂತಾದುವೆಲ್ಲ ಹೊರಗಿಲ್ಲ, ಅವು ತನ್ನೊಳಗೆ. ಇವುಗಳನ್ನು ತಮ್ಮೊಳಗೆ ಅರಸಿ ಕಾಣುವುದು ಬಿಟ್ಟು, ಹೊರಗೆ ಹುಡುಕಾಡುವವರು ಶಿವತತ್ತ್ವವನ್ನು ಸಾಧಿಸಲಾರರು."

ಹೀಗೆಂದು ಬಸವಣ್ಣ ನವರಿಗೆ ಉಪದೇಶಿಸಿ, ಮತ್ತೆ ಉಳಿದ ಶಿವಭಕ್ತರನ್ನುದ್ದೇಶಿಸಿ ಪ್ರಭು ಹೇಳಿದರು: "ಇದು ನಿಮ್ಮ ಅನುಭವಕ್ಕೆ ಹೊಂದಿ ಬರುವವರೆಗೂ ನಾನು ಹೇಳಿದ್ದನ್ನು ದೃಢವಾಗಿ ಅಂಗೀಕರಿಸಿ ಅಭ್ಯಾಸ ಮಾಡುತ್ತಿರಿ. ಇದನ್ನು ನೀವು ನಡಸುತ್ತಿರುವಾಗ ನಾನು ಮತ್ತೆ ಬರುತ್ತೇನೆ, ಮುಂದಿನ ಉಪದೇಶವನ್ನು ಆಗ ಕೊಡುತ್ತೇನೆ. ಯಾರು ಯಾರು ಭಕ್ತಿಯನ್ನು ಮಾಡಿ ಮುಕ್ತಿಯನ್ನು ಪಡೆಯುವರೋ ನೋಡೋಣ. ಅಂತೂ ನಾನು ಹೇಳಿದ್ದನ್ನು ಮರೆಯದಿರಿ. ನಿಶ್ಚಲರಾಗಿ, ಧೈರ್ಯದಿಂದ, ಉದಾರವಾದ ನಡತೆ ನಡೆದು, ಕೆಟ್ಟದಾರಿಗೆ ಹೋಗದೆ, ನಿರ್ವಹಿಸಿ ಮುಂದೆಸಾಗುವವರನ್ನು ನಾನು ಆಗ ಬಂದು ಕಾಣುತ್ತೇನೆ. ಭಕ್ತರೆಲ್ಲರೂ ಅಚಲರಾಗಿರಬೇಕು, ನಿತ್ಯರಾಗಿರಬೇಕು, ಮುಕ್ತರಾಗಿರಬೇಕು, ಭಕ್ತಿಯಿಂದಿರಬೇಕು."

ಅನಂತರ, ಸಿದ್ಧರಾಮಯ್ಯನನ್ನೂ ಬಸವರಾಜರನ್ನೂ ತಮ್ಮ ಚಿತ್ತ ದಣಿಯುವಂತೆ ಸಂತೋಷದಿಂದ ಹರಸಿ ಪ್ರಭುದೇವರು ಕಲ್ಯಾಣಕ್ಕೆ ಹೊರಟರು. ಕಲ್ಯಾಣದ ಶಿವಶರಣರೆಲ್ಲರೂ ಅವರಿಗೆ ಸಾಷ್ಟಾಂಗವಾಗಿ ನಮಸ್ಕಾರ ಮಾಡಿ, ಭಕ್ತಿಯಿಂದ ಅವರನ್ನು ಕಳಿಹಿಕೊಟ್ಟರು.

ಇತ್ತ ಬಸವೇಶ್ವರರು ತಮ್ಮ ಶಿವಭಕ್ತಿಯ ಅಭ್ಯಾಸದಲ್ಲಿ ಮುಂದುವರಿಯುತ್ತಾ, “ನನ್ನ ಗುರುವಿನ ಪಾದಗಳನ್ನು ನಾನು ಹೇಗೆ ಸೇವೆ ಮಾಡಿ, ಮನಸ್ಸಿನ ಸಮಾಧಿಯನ್ನು ಸಂಪಾದಿಸಲಿ? ಆ ಪರಮಪುರುಷನು ಯಾವ ವೇಷದಲ್ಲಿ ಬರುವನೊ? ಆತನ ಹುರುಳನ್ನು ನಾನು ತಿಳಿಯುವುದು ಹೇಗೆ?” ಎಂದು ಚಿಂತಿಸಿದರು. “ನನ್ನ ದೇವನು ಯಾವ ವೇಷದಲ್ಲಿ ಬಂದರೂ ಆತನ ಒಳಗನ್ನು ತಿಳಿಯುವ ಹಾಗೆ ನಾನು ಒಂದು ಉಪಾಯಮಾಡಿ, ಕಂಡುಹಿಡಿಯುತ್ತೇನೆ” ಎಂದುಕೊಂಡು ಒಂದು ಗುರುಪೀಠವನ್ನು ನಿರ್ಮಾಣಮಾಡಿಸಿದರು. ಅದಕ್ಕೆ 'ಶೂನ್ಯ ಸಿಂಹಾಸನ' ಎಂದು ಹೆಸರಿಟ್ಟರು. 'ಶೂನ್ಯ' ಎನ್ನುವುದು ಪರವಸ್ತುವಿಗೆ ಹೆಸರು. ಆ ಶೂನ್ಯಕ್ಕೆ 'ಸಿಂಹಾಸನ'ವೆಂದರೆ ಭಕ್ತನ ಹೃದಯವೆಂದು ಸಂಕೇತ. ಭಕ್ತನ ಹೃದಯದ ಲಕ್ಷಣಗಳು ಕಣ್ಣಿಗೆ ಕಾಣುವ ಹಾಗೆ ಬಣ್ಣಬಣ್ಣದ ರತ್ನಗಳಿಂದ ಆ ಪೀಠವನ್ನು ಮಾಡಿಸಿದರು. ಚಂದ್ರಕಾಂತ ಶಿಲೆಯ ಒಂದು ಹಪ್ಪಳೆ, ಅದಕ್ಕೆ ಏರಿ ಹೋಗಲು ಮೆಟ್ಟಿಲು, ಸುತ್ತಲೂ ಹೊಂದಿಕೊಂಡು ಏಳು ಆವರಣದ ಗೋಡೆ, ಇವು ಒಂದಕ್ಕಿಂತ ಒಂದು ಅಧಿಕತರ ಎನ್ನಿಸುವಂತೆ ಚಿನ್ನದಿಂದಲೂ ಪಚ್ಚೆ ಮುಂತಾದ ರತ್ನಗಳಿಂದಲೂ ಆ ಪೀಠದ ನಿರ್ಮಾಣವಾಯಿತು.

ಹೀಗೇ ಹನ್ನೆರಡು ವರುಷ ಕಳೆಯಿತು. ಶೂನ್ಯಪೀಠ ಬರಿದಾಗಿಯೇ ಉಳಿಯಿತು. “ನನ್ನ ದೇವರು ಎಂದು ಬಂದಾನೋ! ನನ್ನ ಕಣ್ಣಿನ ಬರ ಎಂದಿಗೆ ಇಂಗೀತೋ! ಅರಸರು ಅರಿಯದ ಬಿಟ್ಟಕೆಲಸದ ಹಾಗಾಯಿತಲ್ಲಾ ನಾನು ಮಾಡುವ

ಕಾರ್ಯ!" ಎಂದು ಬಸವಣ್ಣನವರು ಚಿಂತಿಸುತ್ತ, ಹೊರಗೆ ಏನು ಶಬ್ದವಾದರೂ ಗುರು ಬಂದರೆಂದೇ ನಿರೀಕ್ಷಿಸುತ್ತ ಹಂಬಲಿಸುತ್ತಿದ್ದರು.

ಈ ಪ್ರಕಾರವಾಗಿ ಶಿವಸಮಾಧಿಯ ಪ್ರೀತಿಯಿಂದ ಇರುತ್ತಿರುವಾಗ, ಒಂದು ದಿನ ಅಲ್ಲಮದೇವರು ತನ್ನ ಬಳಿಗೆ ಬಂದು ತನಗೆ ಶಿವತತ್ತ್ವದ ವಿಭೂತಿಯನ್ನು ದಯಪಾಲಿಸಿದಂತೆ ಬಸವಣ್ಣನವರು ತಮ್ಮ ಅಂತರ್ಮುಖದ ಕನ್ನಡಿಯಲ್ಲಿ ಕಂಡರು. ಕೂಡಲೇ "ಯಾವ ವೇಷವನ್ನು ಗುರು ತೊಟ್ಟು ಬರುವನೋ? ಯಾವ ದಾರಿಯಲ್ಲಿ, ಯಾವ ವೇಳೆಯಲ್ಲಿ ಬರುವನೋ? ತಿಳಿಯುವುದು ಕಷ್ಟ" ಎಂದು ಪ್ರಭುದೇವರನ್ನು ಸ್ವಾಗತಿಸಲು ತಾವೇ ಎದ್ದು ಹೋದರು. ಅವರ ಎಡಬಲಗಳಲ್ಲಿ ಭಕ್ತರ ಸಮೂಹ, ಹಿಂದೆ ರಾಜಕುಮಾರರ ಸಂದಣಿ, ಮುಂದೆ ದಾರಿ ಬಿಡಿಸುತ್ತಾ ಹೋಗುವವರ ಗುಂಪು—ಇವರ ಮಧ್ಯೆ ಬಸವಣ್ಣನವರು ನಡೆದರು.

ಇತ್ತ ಪ್ರಭುವಾದರೋ "ವಂದನೆಗೆ ತಕ್ಕ ವೇಷಗಳನ್ನು ಹೊಂದದೆ ಹುಚ್ಚನ ವೇಷವನ್ನು ಧರಿಸಿ ಹೋದರೆ, ನನ್ನ ಇಂಗಿತಗಳ ಅಂತಸ್ಥವನ್ನು ಬಸವಣ್ಣ ತಿಳಿಯುವನೋ? ತಿಳಿಯದೆ ಮಂದಮತಿಯಾಗಿರುವನೋ? ನೋಡುತ್ತೇನೆ" ಎಂದು ಹುಚ್ಚನ ವೇಷದಿಂದ ಕಲ್ಯಾಣಕ್ಕೆ ಬಂದರು. ಕೆದರಿದ ತಲೆ, ಕೆಂಚು ಕೂದಲು, ನೀಡಿದ ದೇಹ, ಜೋತುಬಿದ್ದ ತೋಳು ಮುಚ್ಚದ ರೆಪ್ಪೆ, ಬಿಟ್ಟ ಕಣ್ಣು, ಉದ್ದ ಕಿವಿ, ತಡವರಿಸುವ ನಡುಗೆ, ಆಲಸ್ಯದ ಮೈ—ಹೀಗೆ ಪ್ರಭು ಬಂದರು. ನೋಡುವವರನ್ನು ಅಟ್ಟಿಸಿಕೊಂಡು ಹೋಗುವರು, ಅವರನ್ನು ಮುಟ್ಟಿ ಹಿಂದಕ್ಕೆ ಓಡಿ ಬರುವರು, ದಾನ ಕೊಡಲು ಬಂದವರನ್ನು ಹಂಗಿಸುವರು, ಬೀಳುವರು, ಏಳುವರು, ಹಾಡುವರು, ಹುಚ್ಚುಹುಚ್ಚಾಗಿ ಆಡುವರು. ಒಮ್ಮೆ ಮಗುವಿನಂತೆ, ಒಮ್ಮೆ ಗುರುವಿನಂತೆ ಒಮ್ಮೆ ಬುದ್ಧಿಯಿಲ್ಲದವನಂತೆ, ಒಮ್ಮೆ ಬುದ್ಧಿಶಾಲಿಯಂತೆ ಆಡುವರು. ಒಮ್ಮೆ ಕಣ್ಣಿಗೆ ಕಟ್ಟಿದಂತೆ ಕಾಣುವರು, ಒಮ್ಮೆ ಕಾಣದಂತೆ ತಟ್ಟನೆ ಬಯಲಾಗುವರು. ಒಮ್ಮೆ ಇಲ್ಲಿರುವರು, ಒಮ್ಮೆ ಅಲ್ಲಿರುವರು, ಒಮ್ಮೆ ಎಲ್ಲೆಲ್ಲೂ ಇರುವರು. ಹಾಡಿದರೆ ಹಾಡುವರು, ಕುಣಿದರೆ ಕುಣಿಯುವರು,

ಕೊಂಡಾಡಿದರೆ ಕೊಂಡಾಡುವರು, ನಮಿಸಿದರೆ ನಮಿಸುವರು, ನೋಡಿದರೆ ನೋಡುವರು, ಜನ ಹೇಗೆ ಆಡಿದರೆ ತಾವೂ ಹಾಗೇ ಆಡುವರು.

ಕಂಡವರೆಲ್ಲ "ಇದು ಏಕೆ ಇವನು ಹೀಗೆ?" ಎಂದು ಬೆರಗಾಗಿ ನೋಡಿದರು. ಬಸವಣ್ಣನವರಿಗೆ ಒಬ್ಬರಿಗೆ ಮಾತ್ರ ಆ ಕಪಟ ವೇಷದ ರಹಸ್ಯ ಕಂಡುಹೋಯಿತು. ಕಣ್ಣಿಗೆ ಅಂಜನ ಹಾಕಿಕೊಂಡವರಿಗೆ ನೆಲದ ಮರೆಯಲ್ಲಿರುವ ನಿಕ್ಷೇಪ ಕಂಡುಬರುವ ಹಾಗೆ ನಿರ್ಮಲವಾದ ಇಂದ್ರಿಯಗಳುಳ್ಳ ಬಸವೇಶ್ವರರಿಗೆ ಹುಚ್ಚನ ವೇಷದೊಳಗಿನ ಗುರು ಕಾಣಿಸಿಕೊಂಡರು. ಕೂಡಲೇ ಕಣ್ಣಿನಲ್ಲಿ ಆನಂದಾಶ್ರು, ಮೈಯಲ್ಲಿ ರೋಮಾಂಚ, ಮನದಲ್ಲಿ ಸಂತೋಷ ಮಿತಿಮೀರಿ, ಮಾತನಾಡಲಾರದೆ ಬಸವಣ್ಣನವರು ಪ್ರಭುವಿನ ಪಾದಗಳಲ್ಲಿ ಸಾಷ್ಟಾಂಗವಾಗಿ ಎರಗಿದರು. ಅದನ್ನು ಕಂಡು ಮಹಾಮಹಿಮರಾದ ಎಲ್ಲ ಶಿವಭಕ್ತರೂ ತಾವೂ ಬಂದು ಬಂದು ಅಡ್ಡಬಿದ್ದರು. ವನಿತೆಯರು ನಲವಿನಿಂದ ಬಂದು ಕೈಯ ಉಗುರುಗಳ ಕಾಂತಿಯನ್ನೂ ಕಣ್ಣುಗಳ ಕಾಂತಿಯನ್ನೂ ನಿವಾಳಿಸುತ್ತ, ಮಂಗಳಾರತಿಯನ್ನು ಬೆಳಗಿದರು.

ಹುಚ್ಚನ ವೇಷದಲ್ಲಿನ ಪ್ರಭುದೇವರು ಭಕ್ತರಿಗೆ ಅಧೀನರಾಗಿ ಬಸವರಾಜರ ಮಂದಿರಕ್ಕೆ ಬಂದರು. ಅಲ್ಲಿ ತಮಗೆ ಒಪ್ಪಿಸಿದ ಶೂನ್ಯ ಸಿಂಹಾಸನನನ್ನು ಏರಿದರು. ಬಸವಣ್ಣನವರು ಬಿಚ್ಚಿದ ಕಣ್ಣು ಮುಚ್ಚದೆ, ಎದ್ದ ರೋಮಾಂಚ ಇಳಿಯದೆ, ಮೈಯೆಲ್ಲ ಕಣ್ಣಾಗಿ, ಕಣ್ಣು ತುಂಬ ಆನಂದದ ಕಣ್ಣೀರು ತುಂಬಿ, ಭಕ್ತಿಯ ಪರವಶತೆಯಿಂದ ನಿಂತಿದ್ದರು.

ಆ ಸಮಯದಲ್ಲಿ ಅಲ್ಲಿಗೆ ಆರೋಗಣೆಗಾಗಿ ಅನೇಕ ರೀತಿಯ ಜಂಗಮರು ಬಂದಿದ್ದರು: ಜಡೆ ಬಿಟ್ಟಿ ವರು ಕೆಲವರು, ಬೋಳುತಲೆಯವರು ಕೆಲವರು, ವಿಭೂತಿ ಧರಿಸಿದವರು, ಲಿಂಗ ಕಟ್ಟಿದವರು, ಕಮಂಡಲು ಹಿಡಿದವರು, ಜಪಮಣಿ ಎಣಿಸುವವರು, ಕಂಬಳಿ ಕಂಥೆ ಹೊದ್ದವರು. ಹುಚ್ಚನ ವೇಷದವನೊಬ್ಬ ಶೂನ್ಯ ಸಿಂಹಾಸನವೇರಿದ್ದನ್ನೂ, ಬಸವಣ್ಣನವರು ಅವನಿಗೆ ಮೆಚ್ಚಿ ಮೈಮರೆತದ್ದನ್ನೂ ಅವರು

ನೋಡಿದರು. ಅದೇನೆಂದು ಅವರಿಗೆ ಅರ್ಥವಾಗಲಿಲ್ಲ. “ಬಸವಣ್ಣನ ರೀತಿ ಇಂದು ಏನೋ ಹೊಸದಾಗಿದೆ. ಹಸಿದ ಜಂಗಮ ಆರೋಗಣಗೆ ಬಂದರೆ, ನಮ್ಮನ್ನು ಮರೆತು ಈತ ಈ ಇಂದ್ರಜಾಲಿಗನಿಗೆ ಮರುಳಾಗಿ ಹೋಗಿದ್ದಾನೆ. ಇನ್ನು ಈತನ ಗೊಡವೆ ನಮಗೇಕೆ?” ಎಂದು ಅವರೆಲ್ಲ ಅಲ್ಲಿಂದ ಎದ್ದು ಹೊರಟುಹೋದರು.

ಬಸವಣ್ಣನವರಿಗೆ ಅದು ತಿಳಿಯಿತು. “ಅಯ್ಯೋ, ಉಂಬ ಜಂಗಮ ಬಂದರೆ ಅವರಿಗೆ ಉಪಚಾರ ಮಾಡುವುದು ಮರೆತು ಹೀಗೆ ಅಪಚಾರ ಮಾಡಿದೆನಲ್ಲಾ!” ಎಂದು ಅವರಿಗೆ ಚಿಂತೆಯಾಯಿತು.

ಅವರ ಚಿಂತೆಯನ್ನು ಕಂಡು, ತಿಳಿದರೂ ತಿಳಿಯದಂತೆ, ಪ್ರಭು ಕೇಳಿದರು: “ನಾವು ಬಡಜಂಗಮ ಬಂದರೆ, ನೀನು, ನಮ್ಮನ್ನು ತೃಪ್ತಿ ಪಡಿಸುವುದು ಬಿಟ್ಟು, ಏನು ಚಿಂತೆ ಮಾಡುತ್ತಿದ್ದೀಯ ಬಸವಣ್ಣ?”

“ಪ್ರಭುವೆ! ಜಂಗಮರೆಲ್ಲ ಎದ್ದುಹೋದರು ಮಾಡಿಸಿದ ಅಡಿಗೆ ಹೇರಳವಾಗಿದೆ. ಅದನ್ನು ಇನ್ನು ಆರೋಗಿಸುವವರು ಯಾರು, ಎಂದು ಚಿಂತಿಸುತ್ತಿದ್ದೆ” ಎಂದರು, ಬಸವಣ್ಣನವರು.

ಅದಕ್ಕೆ ಪ್ರಭು “ನಿನಗೆ ನಾನು ಉತ್ತರ ಕೊಡಲಾರೆ. ಆದರೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮವು ಸಂತುಷ್ಟಿಪಡುವಂತೆ ತೋರಿಸುತ್ತೇನೆ. ಮೊದಲು ನನ್ನ ಹಸಿವನ್ನು ನಿಲ್ಲಿಸಲು ನಿನಗಾದರೆ, ನೀನು ನಿಲ್ಲಿಸು” ಎಂದರು.

ಒಡನೆ ಬಸವಣ್ಣನವರು ಪನ್ನೀರಿನಿಂದ ಪ್ರಭುವಿನ ಪಾದಗಳನ್ನು ತೊಳೆದರು, ತಂಪಾದ ಚಂದನವನ್ನು ಲೇಪಿಸಿದರು, ಮುತ್ತಿನ ಅಕ್ಷತೆಯನ್ನು ತಳಿದರು, ಹೊಸ ಹೂವಿನಿಂದ ಪೂಜೆಮಾಡಿದರು, ಪರಿಮಳದ ಧೂಪನನ್ನಿಕ್ಕಿ, ರತ್ನದ ದೀಪವನ್ನು ಎತ್ತಿ, ವಂದಿಸಿದರು. ನವರತ್ನಗಳನ್ನು ಮೆಟ್ಟಿದ ಚಿನ್ನದ ಮಣೆಗಳನ್ನು ಹಾಸಿದರು, ತಟ್ಟೆಗಳನ್ನೂ ಪಕ್ಕದ ಬಟ್ಟಲುಗಳನ್ನೂ ತಂದಿಟ್ಟರು, ಬಿಸಿಬಿಸಿಯಾಗಿ ಪರಿಪಕ್ವವಾದ ಷಡ್ರಸದ

ಊಟವನ್ನು ಪರಮ ಸಡಗರದಿಂದ ತಾವೇ ತಂದು ಬಡಿಸಿದರು. ಹೊನ್ನ ಕೊಪ್ಪರಿಗೆಯ ತುಂಬ ಪಾನ, ಹೊನ್ನ ಕೊಪ್ಪರಿಗೆಯ ತುಂಬ ತುಪ್ಪ, ಹೊನ್ನ ಕೊಪ್ಪರಿಗೆಯ ತುಂಬ ಪಾಯಸ ಪರಮಾನ್ನ, ಹೊನ್ನ ಕೊಪ್ಪರಿಗೆಯ ತುಂಬ ಅನ್ನ—ಎಲ್ಲವನ್ನೂ ತಂದು ತಂದಂತೆ ಪ್ರಭು ನಗುನಗುತ್ತ ಆರೋಗಣೆಮಾಡಿದರು.

ಅಲ್ಲಮಪ್ರಭು ಊಟಮಾಡುವ ತವಕದ ಅತಿಶಯವನ್ನು ಕಂಡು ಭಕ್ತರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಓಡಿ, ತಾವು ಮಾಡಿದ ಪಕ್ವಾನ್ನ ಫಲಗಳನ್ನೆಲ್ಲ ತಂದು ತಂದು ಬಡಿಸಿದರು. ಅದರೂ ಪ್ರಭುವಿನ ಹಸಿವೆ ಹೆಚ್ಚುತ್ತಲೇ ಇತ್ತು. "ಆಕಾಶವೇ ಬಾಯಿತೆರೆದು ಜೀರ್ಣಿಸಿಕೊಳ್ಳುವುದಾದರೆ, ಅದಕ್ಕೆ ತೃಪ್ತಿಯಾಗಿ ತೇಗು ಬರುವಂತೆ ಇಕ್ಕಬಲ್ಲವರು ಯಾರು? ಅವಕಾಶ ಕೊಟ್ಟರೆ ಸಕಲ ಲೋಕವನ್ನೇ ಉಣಬಲ್ಲ ಮಹಾಮಹಿಮನಿಗೆ ಬಸವಣ್ಣ ಆರೋಗಣೆ ನೀಡುತ್ತಿದ್ದಾನೆ! ಬಸವನೇ ಶಿವ!" ಎಂದು ಎಲ್ಲರೂ ಆಶ್ಚರ್ಯದಿಂದ ಕೊಂಡಾಡಿದರು.

ಬಸವಣ್ಣನವರು ತಮ್ಮ ಸಮಸ್ತ ಸಂಪತ್ತುಸಾಧನಗಳಿಂದ ಸಿದ್ಧಪಡಿಸಿಕೊಂಡಿದ್ದ ಅಡುಗೆಯೆಲ್ಲಾ ಊಟದ ಮೊದಲನೆಯ ಆರಂಭದಲ್ಲೇ ಮುಗಿದುಹೋಯಿತಾದರೂ ಅಲ್ಲಮಪ್ರಭುವಿನ ಹಸಿವೆ ಏನೇನೂ ಮಸಕಾಗಲಿಲ್ಲ. "ಯಾವ ಮುಖದಲ್ಲಿ ಬಂದು ಬೇಡಿದರೂ ನಾನು ನೀಡುತ್ತೇನೆ—ಎಂದು ಆಡಿದ ಮಾತಿಗೆ ಭಂಗ ಬಂತಲ್ಲಾ, ಶಿವ ಶಿವಾ! ದೇವನೇ ಹೀಗೆ ಹಸಿದು ಉಣುತ್ತಿರುವಾಗ ನಾನು ಹೇಗೆ ತಾನೆ ತೃಪ್ತಿಪಡಿಸಲಿ?" ಎಂದು ಬಸವಣ್ಣನವರು ಚಿಂತೆಗೆ ಒಳಗಾದರು.

ಆಗ ಮಡಿವಾಳಯ್ಯನೂ ಚೆನ್ನಬಸವನೂ ಬಸವರಾಜರಿಗೆ ಹೇಳಿದರು: "ಯುದ್ಧದಲ್ಲಿ ವೀರನಿಗೆ ಕರುಳು ಹೊರಗೆ ಬಂದರೆ, ಅದನ್ನು ಕೈಯಲ್ಲಿ ಹಿಡಿದೇ ಹೋರಾಡುವನಲ್ಲದೆ, ಅವನು ಹಿಮ್ಮೆಟ್ಟುವುದಿಲ್ಲ. ಅದರಂತೆ ಭಕ್ತನ ಧನ ತೀರಿದರೆ ಏನಂತೆ? ತಾನು ತನ್ನ ಮೈ ಮನಸ್ಸುಗಳನ್ನು ಅರ್ಪಿಸಿ ತೃಪ್ತಿಪಡಿಸಬಹುದಲ್ಲಾ!"

ಬಸವಣ್ಣನವರಿಗೆ ಹೋದ ಪ್ರಾಣ ಬಂದಹಾಗಾಯಿತು. "ನೀವು ನನಗೆ ಆಪ್ತರಾದ ಕಾರಣದಿಂದ ಆಪತ್ತಿನ ಹೊತ್ತಿಗೆ ಆದಿರಿ. ನೀವೇ ನನಗೆ ತಾಯಿತಂದೆ. ತಡಮಾಡದೆ ಈ ನನ್ನ ದೇಹವನ್ನೇ ಈ ನನ್ನ ಗುರುವಿಗೆ ಅರ್ಪಿಸುತ್ತೇನೆ" ಎಂದು ಅವರು ಮನಸ್ಸು ಮಾಡಿದರು.

ಆಗ ಪ್ರಭು ಹೇಳಿದರು: "ನಾನು ಹಸಿದು ಬಂದವನಲ್ಲ, ಹಣದ ಆಸೆಗೆ ಬಂದವನಲ್ಲ, ಯಾವುದನ್ನೂ ಕಾಮಿಸಿ ಬಂದವನಲ್ಲ. ನಿನ್ನ ದಾಸೋಹತನವನ್ನು ನೋಡಿ, ಅದನ್ನು ತಿದ್ದುವೆನೆಂದು ಬಂದವನು ನಾನು. ನಿನ್ನ ಅನ್ನದ ಆಸೆ ನನಗೇಕೆ? ನಿನ್ನ ಮನಸ್ಸಿನಲ್ಲಿ 'ನಾನು ಮಾಡಿ ತೃಪ್ತಿಪಡಿಸುವೆ'ನೆಂಬ ವಿಕಾರವಿದ್ದುದರಿಂದ ನನ್ನ ಹಸಿವೆ ಹೆಚ್ಚುತ್ತ ಹೋಯಿತಲ್ಲದೆ, ನಿನ್ನ ಮನಸ್ಸಿನಲ್ಲಿ ಆ ಭಾವವಿಲ್ಲದೆ ಹೋದರೆ ನನ್ನ ಮೈಗೂ ಹಸಿವಿಲ್ಲ."

ಹೀಗೆ ಗುರುವಿನ ಹಸಿವು ಹಿಂಗಿತು. ಬಸವಣ್ಣನವರು ಅವರಿಗೆ ಹಸ್ತೋದಕವನ್ನು ಕೊಟ್ಟು, ಸುಗಂಧದ ಲೇಪನವನ್ನು ಸಮರ್ಪಿಸಿ ಪರಿಮಳದ ಕರ್ಪೂರವೀಳೆಯವನ್ನು ಒಪ್ಪಿಸಿ, ಭಕ್ತಿಯಿಂದ ಪಾದಗಳಿಗೆ ನಮಸ್ಕರಿಸಿದರು.

ಅನಂತರ ಪ್ರಭು ಹೇಳಿದರು: "ಬಾ, ಬಸವ, ನನ್ನ ಹಸಿವು ಹಿಂಗಿತು. ಆದರೆ ನಿನ್ನ ಜಂಗಮ ಹಸಿದುಹೋದರಲ್ಲಾ. ಅವರನ್ನು ಕರೆದು ತಾ, ಹೋಗು." ಬಸವಣ್ಣನವರು ಹೋಗಿ ಅವರನ್ನು ಕರೆದರೆ ಆ ಮುನಿಸಿಕೊಂಡುಹೋದ ಜಂಗಮರೆಂದರು: "ನಿನ್ನ ಗುರುವಿನ ಮಹಿಮೆಯೋ, ಅಥವಾ ನಿನ್ನ ಮಹಿಮೆಯೋ, ಅಂತೂ ನಿನ್ನ ಗುರು ಆರೋಗಣೆ ಮಾಡಲು ನಮಗೆಲ್ಲ ಹೊಟ್ಟೆ ತುಂಬಿತು. ನಿನ್ನ ಗುರು ಸಚರಾಚರದ ಚೈತನ್ಯಮೂರ್ತಿಯೇ ನಿಶ್ಚಯ!" ಬಸವಣ್ಣನವರು ಆ ಜಂಗಮರನ್ನು ನೋಡಿದರೆ—ಗುರುವಿಗೆ ಹಚ್ಚಿದ ಸುಗಂಧ ಅವರ ಮೈಮೇಲೆ! ಗುರುವಿಗೆ ಇಟ್ಟ ಅಕ್ಷತೆ ಅವರ ತಲೆ ಮೇಲೆ! ಗುರುವಿಗೆ ಹಾಕಿದ ಹೂ ಹಾರ ಅವರ ಕೊರಳಲ್ಲಿ! ಆಗ, ಗುರುವಿಗೂ ಜಂಗಮಕ್ಕೂ ಭೇದವಿಲ್ಲವೆಂಬುದು ಬಸವಣ್ಣನವರಿಗೆ ಅನುಭವವಾಯಿತು! ತಮ್ಮ

ಮಂದಿರಕ್ಕೆ ಗುಡುಗುಡನೆ ಬಂದರು, ಗುರುವಿನ ಪಾದದಲ್ಲಿ ಶರಣೆಂದರು, ನಡೆದದ್ದೆಲ್ಲ ತಿಳಿಸಿದರು: "ಪ್ರಭುವೆ! ಬಸಿರಿ ಹೆಂಗಸಿನ ಊಟ ಹೊಟ್ಟೆಯ ಮಗುವನ್ನು ತೃಪ್ತಿಪಡಿಸುವ ಹಾಗೆಯೇ ಜಗತ್ತುಗಳನ್ನು ಒಳಗೆ ಅಡಗಿಸಿಕೊಂಡ ನೀನು ತಣಿಯಲು ಜಂಗಮವೆಲ್ಲ ಸಂತುಷ್ಟಿ ಪಡೆಯಿತು. ಲೋಕದಲ್ಲಿ ಇನ್ನೊಂದು ಹೊಸತನ್ನು ಈಗ ಕಂಡೆವು, ತಿಳಿದೆವು!"

ಅದಕ್ಕೆ ಪ್ರಭು "ನಿನ್ನ ಭಾವನೆಗೆ ಅನುಗುಣವಾಗಿ ನಿನ್ನ ಜಂಗಮ ತೃಪ್ತಿಪಡೆದರೆ, ಅದಕ್ಕೆ ನನ್ನನ್ನು ಏಕೆ ಗುರಿಮಾಡುತ್ತೀಯೆ? ಬರಿಯ ಬಯಲಾದ ನಾನು ನಿನಗೋಸ್ಕರವಾಗಿ ಈ ರೂಪವನ್ನು ತಾಳಿದೆನೇ ಹೊರತು, ದಿಟವಾಗಿ ನೋಡಿದರೆ, ಈ ನಾನೆಂಬುದು ಇಲ್ಲ, ಬಸವಣ್ಣ." ಎಂದೂ ಹೇಳಿದರೆ; ಬಸವಣ್ಣನವರು ಎಂದರು: "ಶಿವಲಿಂಗವಾದ ನೀನು ಆರೋಗಿಸಲು ಜಂಗಮಕ್ಕೆ ಸಂತೃಪ್ತಿಯಾಯಿತು. ಜಂಗಮದ ಸಂತೃಪ್ತಿಯಿಂದ ಜಗತ್ತಿನ ಚರಾಚರವೆಲ್ಲಕ್ಕೂ ತೃಪ್ತಿಯಾಯಿತು. ಇದೆಲ್ಲವೂ ನಿನ್ನ ವಿಚಿತ್ರವಾದ ಲೀಲೆಗಳ ಮಹಮೆ, ಪ್ರಭುವೆ!"

ಆಗ ಪ್ರಭುದೇವರು ಹೇಳಿದರು; "ಗುರುವಿನ ನೆಲೆಯೇನೆಂಬುದು ಬಸವನಿಂದ ಪ್ರಕಟವಾಯಿತು. ಲಿಂಗದ ಘನತೆಯೇನೆಂಬುದು ಬಸವನಿಂದ ಪ್ರಸಿದ್ಧವಾಯಿತು. ಜಂಗಮದ ಮಹಿಮೆಯೇನೆಂಬುದು ಬಸವನಿಂದ ಲೋಕಕ್ಕೆ ತಿಳಿಯಿತು. ಹೀಗೆ, ಬಸವನಿಂದ ಅಧ್ಯಾತ್ಮವಿದ್ಯೆ ಪ್ರಸಾರಹೊಂದಿದ ಕಾರಣದಿಂದ ಬಸವನೇ ಪರದೈವ!"

ಹೀಗೆ ಗುರುವಿನ ಅನುಗ್ರಹಕ್ಕೆ ಪಾತ್ರರಾದ ಬಸವಣ್ಣನವರು "ದೇವ, ನಿನ್ನ ಭಕ್ತರೆಲ್ಲರೂ ಜೀವಾತ್ಮರುಗಳು. ನೀನೇ ಪರಮಾತ್ಮ ಈ ಜೀವಪರಮರುಗಳನ್ನು ಒಂದುಮಾಡುವ ಐಕ್ಯಸ್ಥಲವನ್ನು ನೀನು ನಮಗೆ ಕರುಣಿಸು" ಎಂದು ಭಯಭಕ್ತಿಯಿಂದ ಮತ್ತೆಮತ್ತೆ ಬೇಡಿಕೊಂಡು, ಕಾಲಿಗೆರಗಿದರು.

ಆಗ "ಹಲವು ದಿವಸ ಮೈಮೇಲೆ ಎಚ್ಚರವಿಲ್ಲದೆ ನಿದ್ರೆಯ ಬಲೆಗೆ ಸಿಕ್ಕಿ ಕೊಲೆ ಮಾಡುತ್ತಿರುವ ಹಾಗೆ ಕೆಟ್ಟ ಕನಸು ಕಾಣುವವರನ್ನು ಎಬ್ಬಿಸುವ ರೀತಿಯಲ್ಲಿ ಈ ಸಂಸಾರದ ಸ್ವಪ್ನವನ್ನು ಹೋಗಲಾಡಿಸಿ, ನಿಮಗೆ ನಾನು ನಿತ್ಯಪದವಿಯನ್ನು ಕೊಡುತ್ತೇನೆ" ಎಂದು ಪ್ರಭು ಅವರೆಲ್ಲರಿಗೂ ಅಭಯವನ್ನು ಕೊಟ್ಟು, ಅನುಗ್ರಹ ಮಾಡಿ ಅಲ್ಲಿಂದ ಹೊರಟರು.

ಮರದ ತಾಯಿಬೇರಿಗೆ ಅಮೃತದ ನೀರನ್ನು ಹುಯ್ದರೆ, ಅದರ ಸಾರವು ಕೊಂಬೆಗಳಿಗೂ ರೆಂಬೆಗಳಿಗೂ ಹರಿದು ಸೇರುವ ಹಾಗೆ, ಬಸವಣ್ಣನವರ ನೆಪದಲ್ಲಿ ಅವರ ಭಕ್ತಿಬಂಧುಗಳು ಎಲ್ಲರಿಗೂ ಅಲ್ಲಮ ಪ್ರಭುವಿನ ಕರುಣೆ ಆಯಾಸವಿಲ್ಲದೆ ದೊರಕಿಬಂದಿತು.

## ಭಕ್ತವತ್ಸಲ

"ನಿನ್ನ ಕತೆ ಒಂದು ಘಟ್ಟಕ್ಕೆ ಬಂದ ಹಾಗಿದೆ ಅಲ್ಲವೆ, ಶಿವು? ಸ್ವಲ್ಪ ನಿಲ್ಲಿಸು. ಎಲೆ ಎತ್ತಿ, ಪಾತ್ರೆ ತೆಗೆದು, ಗೋಮಯ ಹಾಕಿ ಬರುತ್ತೇನೆ. ಅಷ್ಟರಲ್ಲಿ ನೀನೂ ಹಾಸಿಗೆ ಒದರಿ, ಹಜಾರದಲ್ಲಿ ಹಾಸಿಬಿಡು." ಎನ್ನುತ್ತಾ ಶಿವೂತಾಯಿ ಎದ್ದರು. ಮನೆಕೆಲಸ ಮುಗಿಸಿ, ಅಡುಗೆಮನೆಯ ಬಾಗಿಲು ಮುಚ್ಚಿ, ಬಂದರು. ಮಗ ಹಾಸಿ ಸಿದ್ಧವಾಗಿದ್ದ ಹಾಸಿಗೆಯ ಮೇಲೆ ಕುಳಿತರು. ಮುಂದೆ ಇದ್ದ ತಟ್ಟೆ ಯಿಂದ ಎಲೆಯೆಳೆದುಕೊಂಡು, ಅದಕ್ಕೆ ಸುಣ್ಣ ಬಳಿಯುತ್ತಾ—

"ಆಮೇಲೆ? ಮುಂದಕ್ಕೆ?" ಎಂದರು.

"ಆಮೇಲೇನು, ಮುಂದಕ್ಕೆ? ಪ್ರಭುದೇವರು ಶ್ರೀಶೈಲಕ್ಕೆ ಹೋದರು. ಬಸವಣ್ಣನವರು ಕಲ್ಯಾಣದಿಂದ ಕಪ್ಪಡಿಗೆ ತೆರಳಿ, ಕಪ್ಪಡಿಯಲ್ಲಿ ಶಿವೈಕ್ಯರಾದರು."

"ಅಯ್ಯೋ! ಇದೇನೋ? ಇಷ್ಟು ಮೊಟಕು ಮಾಡಿಬಿಟ್ಟೆ, ಕಥೆಯನ್ನ? ನಿನ್ನ ಪ್ರಭುದೇವರು ಬಸವಣ್ಣನವರ ಹತ್ತಿರ ಹೋಗಿ ಅವರನ್ನು ತಿದ್ದಿದ ಹಾಗೆ ಬೇರೆ ಯಾವ ಭಕ್ತರ ಹತ್ತಿರಲೂ ಹೋಗಲಿಲ್ಲವೆ? ಇನ್ನು ಯಾರನ್ನೂ ತಿದ್ದಲಿಲ್ಲವೆ?"

"ಹೋಗದೆ ಉಂಟೆ, ಅಮ್ಮ! ಪ್ರಭು ಮನೆಬಿಟ್ಟು ಹೊರಟದ್ದೇ ಅದಕ್ಕೋಸ್ಕರ! 'ಶಿವಭಕ್ತರಾದವರು ಯಾರು ಯಾರು ಎಲ್ಲೆಲ್ಲಿ ಇದ್ದರೂ ಅವರ ಮನಸ್ಸಿನ ಒಳಗೂ ಹೊರಗೂ ತುಂಬಿದ ಅಜ್ಞಾನದ ಅಲೆಗಳನ್ನು ನನ್ನ ಕಡೆಗಣ್ಣಿನ ಕಾಂತಿಯಿಂದ ಹೋಗಲಾಡಿಸುತ್ತೇನೆ' ಎಂದು ಅವರು ಬಹಳವಾಗಿ ಸಂಚಾರಮಾಡಿದರು. ಬಸವಣ್ಣನವರನ್ನು ಕಾಣುವ ಮೊದಲು **ಗೊಗ್ಗಯ್ಯ, ಮುಕ್ತಾಯಕ್ಕ, ಸಿದ್ಧರಾಮ** ಮುಂತಾದವರಿಗೆ ಉಪದೇಶ ಕೊಟ್ಟರು; ಬಸವಣ್ಣನವರ ಮಹಮನೆಯಲ್ಲಿರುವಾಗ **ಮಹದೇವಿಯಕ್ಕ**ನವರಿಗೆ ಶಿವಮಾರ್ಗವನ್ನು ಬೋಧಿಸಿದರು; ಬಸವಣ್ಣನವರನ್ನು

ಬೀಳ್ಕೊಂಡು ಹೋದಮೇಲೆ, ಶ್ರೀಶೈಲಕ್ಕೆ ಬಂದಾಗ, **ಗೋರಕ್ಷ**ನೆಂಬ ಸಾಧಕನನ್ನು ಶಿವಪಥಕ್ಕೆ ತಿರುಗಿಸಿಕೊಂಡರು."

"ಹೇಳು ಮತ್ತೆ ಅದನ್ನೆಲ್ಲ. ಅಥವಾ ನಿನಗೇ ಗೊತ್ತಿಲ್ಲವೊ?"

"ಚೆನ್ನಾಯ್ತುಮ್ಮ, ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಎರಡು ವರ್ಷ 'ಪ್ರಭುಲಿಂಗಲೀಲೆ' ಪಾಠ ಹೇಳಿಸಿಕೊಂಡಿದ್ದೇನೆ. ಅದರ ಕಥೆಯನ್ನಾದರೂ ಹೇಳುವುದಕ್ಕೆ ಬರದೆಹೋದರೆ ನಾನು ಇಷ್ಟು ಓದಿದ್ದೂ ಸಾರ್ಥಕವಾಯಿತು!"

—ಎಂದು ಶಿವು ಅಲ್ಲಮಪ್ರಭುವಿನ ಭಕ್ತವತ್ಸಲತೆಯನ್ನು ಎತ್ತಿ ತೋರಿಸುವ ಕಥಾಸಂದರ್ಭಗಳನ್ನು ತಾಯಿಗೆ ಹೇಳತೊಡಗಿದನು.

ಪ್ರಭುದೇವರು. ಮನೆಬಿಟ್ಟು ಹೊರಟ ತರುಣದಲ್ಲಿ, ಅವರು ಬರುವ ದಾರಿಯ ಪಕ್ಕದಲ್ಲಿ ಒಂದು ತೋಟ ಸಿಕ್ಕಿತು. ಅದರಲ್ಲಿ ನಾನಾ ರೀತಿಯ ಹೂಗಿಡಗಳು, ಲತಾಮಂಟಪಗಳು. ಅವುಗಳ ನಡುವೆ ಚೆಲುವಾದ ಕೆಂದಾವರೆಗಳ, ನೈದಿಲೆ ಹೂಗಳ, ತಿಳಿಯ ಕೊಳ. ಆ ತೋಟದ ತೋಟಗಾರನಿಗೆ **ಗೊಗ್ಗಿದೇವ** ಅಥವಾ **ಗೊಗ್ಗಯ್ಯ** ಎಂದು ಹೆಸರು. ಆತನು ತನ್ನ ಚಿತ್ರವನ್ನು ಶುದ್ಧವಾಗಿರಿಸಿಕೊಂಡು, ಈಶ್ವರನನ್ನು ಸದಾ ಭಾವಿಸುತ್ತಿದ್ದನು.

ಪ್ರಭು ಆ ತೋಟಿಗನನ್ನು ಕಂಡರು. "ಇವನ ಬುದ್ಧಿಗೆ ಜ್ಞಾನವನ್ನು ತೀಡುತ್ತೇನೆ" ಎನ್ನುತ್ತ, ಆತನ ಎದುರಿಗೆ ಬಂದು, "ಶರಣಾರ್ಥಿ" ಎಂದರು, ಆತನು ತಾನೂ "ಶರಣಾರ್ಥಿ" ಎಂದು, "ನೀವು ಯಾರು?" ಎಂದು ಪ್ರಶ್ನಿಸಿದನು.

"ನಾವು ಯಾರೆಂದರೆ—ಶಿವಭಕ್ತರು ಎಲ್ಲೆಲ್ಲಿ ಇದ್ದರೂ ಅವರ ಕೃಪಾವಲೋಕನದ ಭಕ್ತಿಯ ಭಿಕ್ಷೆಯನ್ನು ಬೇಡುವವರು. ಅಲ್ಲಮದೇವನೆಂಬುದು

ನಮಗೆ ಹೆಸರು. ಭಕ್ತಯ್ಯ, ನಿನ್ನನ್ನು ನೋಡಿದರೆ, ಶಿವಭಕ್ತನಂತಿರುವೆ. ತಾನು ಗಳಿಸಿದ ಅರ್ಥವನ್ನು ಲಿಂಗಕ್ಕೂ ಜಂಗಮಕ್ಕೂ ಅರ್ಪಿಸಿ, ಮಿಕ್ಕುದನ್ನು ಉಂಡು ಸುಖಿಸುವಾತನೇ ನಿಜವಾದ ಶಿವಭಕ್ತ. ನೀನು ಹೀಗೆ ಸುಮ್ಮನೆ ಶ್ರಮಪಡುವೆಯಲ್ಲಾ, ನಿನ್ನ ಹೆಸರೇನಯ್ಯ?" ಎಂದರು, ಪ್ರಭು.

"ನನ್ನ ಹೆಸರು ಗೊಗ್ಗಯ್ಯ. ನಮ್ಮದು ತೋಟಗವೃತ್ತಿ. ನಾನು ಬೇರೆ ಏನೂ ಅರಿಯೆ. ನಿಮ್ಮ ಮನಸ್ಸಿನ ಬುದ್ಧಿಯಾವುದನ್ನು ನಂಬಿದೆಯೋ ಅದನ್ನು ನನಗೂ ತಿಳಿಸಿ."

ಆತನಿಗೆ ಪ್ರಭು ಹೇಳಿದರು: "ಯಾವ ವ್ಯವಸಾಯವನ್ನು ಮಾಡಿದರೂ ಜೀವವಧೆ ತಪ್ಪುವುದಿಲ್ಲ. ಅದರಿಂದ ದೇವರು ಒಲಿಯುವುದಿಲ್ಲ, ನೋವು ನಿಲ್ಲುವುದಿಲ್ಲ, ಸಾವು ಬಾರದಿರುವುದಿಲ್ಲ. ಕಡೆತನಕ ಬರಿಯ ಆಯಾಸವೇ ಅಲ್ಲದೆ ಬೇರೆ ಫಲವಿಲ್ಲ."

ಅಲ್ಲಮನು ಯಾರೆಂದು, ಪಾಪ, ಆ ಗೊಗ್ಗಯ್ಯ ಕಾಣ. ಆತ ಹೇಳಿದ: "ಇಲ್ಲಿ ಭಕ್ತಿಯನ್ನು ಮಾಡುತ್ತ, ಗುರು ಲಿಂಗ ಜಂಗಮದ ಸೇವೆಮಾಡುತ್ತ, ಕಡೆಯಲ್ಲಿ ಕೈಲಾಸವನ್ನು ಹೊಕ್ಕರೆ, ಸಾವು ನೋವುಗಳೆಂಬ ಸಂಕಟ ಎಲ್ಲಿ ಸೋಕುತ್ತವೆ? ಹುಚ್ಚ! ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ, ಬಲ್ಲವರನ್ನು ಕೇಳು."

"ಹಾಗೆನ್ನದಿರು, ಗೊಗ್ಗಯ್ಯ. ಅಣುಮಾತ್ರವಾದ ಜೀವವನ್ನು ನೋಯಿಸಿದರೂ ಸಾಕು, ಅವನು ಬ್ರಹ್ಮನ ಬಸಿರಿನಲ್ಲಿ ಅಡಗಿಕೊಂಡರೂ ಅವನಿಗೆ ನೋವು ಸಾವುಗಳು ಸಂಭವಿಸದೆ ಇರವು. ಇದು ಖಂಡಿತ. ಕೊಂದವನಿಗೆ ಕೊಲೆ ತಪ್ಪದು. ಹರಿ ಹರ ಬ್ರಹ್ಮಾದಿಗಳು ಯಾರೇ ಆದರೂ, ಬಂಧನವನ್ನು ಉಂಟುಮಾಡುವ ಬಾಹ್ಯ ಕರ್ಮಗಳನ್ನು ನಡಸಿದರಾದರೆ, ಅವರಿಗೆ ಶಾಶ್ವತ ಸುಖವಿಲ್ಲ. ಇಲ್ಲಿ ಭಕ್ತಿಯನ್ನು ಮಾಡಿದರೆ, ಕಡೆಗೆ ಕೈಲಾಸ ಸಿಕ್ಕುವುದೆಂದೆಯಲ್ಲನೆ? ಗುರು ಲಿಂಗ ಜಂಗಮದ ಸೇವೆ ಮಾಡಿದರೂ ಸಾವು ತಪ್ಪುವುದಿಲ್ಲ, ಪ್ರಸಾದವನ್ನು ಸೇವಿಸಿದರೂ ಹಸಿವು ಹಿಂಗುವುದಿಲ್ಲ. ಮುಕ್ತಿಯನ್ನು ಪಡೆಯಬೇಕಾದರೆ ಮನಸ್ಸನ್ನು ಲಯಮಾಡುವುದು ತಿಳಿಯಬೇಕು."

ಹೀಗೆಂದು ಹೇಳಿ, ಪ್ರಭು "ಇದು ಅರ್ಥವಾಗುವುದು ಕಷ್ಟ. ಯಾವುದಾದರೂ ದೃಷ್ಟಾಂತದಿಂದ ಇದನ್ನು ಇವನಿಗೆ ತೋರಿಸುತ್ತೇನೆ. ಇವನನ್ನು ಈ ಹಾದಿಯಲ್ಲಿ ಹತ್ತಿಸುತ್ತೇನೆ." ಎಂದುಕೊಂಡು, ಗೊಗ್ಗಯ್ಯನು ಅಗೆಯುತ್ತಾ ಕಿತ್ತ ಹೆಂಟೆಯ ಕೆಳಗೆ ಆ ಕ್ಷಣದಲ್ಲಿ ಒಂದು ಚಿನ್ನದ ಕಳಸವನ್ನು ಕಾಣಿಸಿದರು. ಏನೂ ಅರಿಯದವನಂತೆ ಆಶ್ಚರ್ಯದಿಂದ "ಇದೇನಿದೇನು!" ಎಂದರು.

ಗೊಗ್ಗಯ್ಯನು ಕೂಡ 'ಇದೇನಿರಬಹುದೊ?' ಎಂದುಕೊಂಡು ನೋಡೋಣವೆಂದು ಅಗೆದರೆ—ಅಲ್ಲಿ ಒಂದು ಸಮಾಧಿಸ್ಥಾನದ ದೇಗುಲ ಕಾಣಿಸಿತು. ಇಬ್ಬರೂ ಹರ್ಷದಿಂದ ಅದರ ಒಳಹೊಕ್ಕರು. ಅಲ್ಲಿ ಅನಿಮಿಷಯ್ಯ ಎಂಬಾತ ಅಲ್ಲಾಡದೆ ಕುಳಿತು ಇಷ್ಟಲಿಂಗದ ಧ್ಯಾನದಲ್ಲಿ ಇದ್ದುದನ್ನು ಅವರು ಕಂಡರು.

"ಇದೇ ನೋಡು, ಗೊಗ್ಗಯ್ಯ, ಶಿವಲಿಂಗ ಭಕ್ತಿಯ ಹೃದಯವನ್ನು ಕಾಣಿಸುವ ರೀತಿ. ಮನಸ್ಸನ್ನು ಲಿಂಗದಲ್ಲಿ ಇಟ್ಟು, ಕಣ್ಣನ್ನು ಲಿಂಗದಲ್ಲಿ ನಟ್ಟು, ಎವೆ ಮುಚ್ಚದೆ, ಇದನ್ನು ಸಾಧಿಸುವುದು ಬಿಟ್ಟು, ಅನ್ಯವ್ಯವಸಾಯದಲ್ಲಿ ಜೀವಬಿಡುವುದು ಹೇಗಾಯಿತು ಗೊತ್ತೆ? ಕಬ್ಬು ತಿನ್ನಬೇಕೆಂದು ಬಯಸಿದವನು ಬಿದಿರು ಅಗಿದ ಹಾಗಾಯಿತು! ಬಡವನು ಅಕ್ಷಯನಿಧಿಯನ್ನು ಎಡವಿದ ಹಾಗೆ, ಹೆಳವನಿಗೆ ಕಾಲು ಬಂದ ಹಾಗೆ ಕುರುಡನಿಗೆ ಕಣ್ಣು ಬಂದ ಹಾಗೆ, ಹುಡುಕುವ ಬಳ್ಳಿ ತಾನಾಗಿಯೇ ಕಾಲಿಗೆ ತೊಡರಿಕೊಂಡ ಹಾಗೆ—ಈಗ ಇಲ್ಲಿ ನನ್ನ ಬಯಕೆಯ ಕಡೆಯನ್ನು ಕಂಡೆನು!" ಎಂದು ಪ್ರಭು ಸಂಭ್ರಮಿಸಿದರು. ಅನಿಮಿಷಯ್ಯನನ್ನು ಕುರಿತು "ನನ್ನ ಗುರುವೆ, ಕರುಣಿಸು. ಭಕ್ತಿಭಾವದ ಕರುವೆ, ಕರುಣಿಸು. ಲಿಂಗ ನಿಷ್ಠೆಯ ಗುರುವೆ, ಕರುಣಿಸು" ಎಂದು ಕೊಂಡಾಡಿದರು. ಪರರಿಗೆ ಪರಮನೇ ಆದ ಆ ಪ್ರಭುದೇವರು ತಾವೂ ಒಬ್ಬ ನಾಡಾಡಿ ಮನುಷ್ಯನೋ ಎಂಬ ಹಾಗೆಯೇ ಬಳಕೆಯ ರೀತಿಯನ್ನು ಅಂಗೀಕರಿಸಿ, ನಟಿಸಿದರು.

ಆಗ, ಸೂಜಿಗಲ್ಲು ಹತ್ತಿರ ಬಂದರೆ ಸೂಜಿ ಹೋಗಿ ಅಂಟಿಕೊಳ್ಳುವುದಿಲ್ಲವೇ ಹಾಗೆ, ಅನಿಮಿಷಯ್ಯನ ಕೈಯಲ್ಲಿದ್ದ ಶಿವಲಿಂಗ ಅಲ್ಲಮ ಪ್ರಭುದೇವರ ಮೈಗೆ ಕೂಡಿತು.

ಏಕೆಂದರೆ, ಸಚ್ಚಿದಾನಂದ ಸ್ವರೂಪವೆನಿಸುವ ನಿತ್ಯನಾದ ಅ ಪ್ರಭುವಿನ ಅಂಶವಲ್ಲವೇ ಆ ಶಿವಲಿಂಗ! ಅದೇ ಕ್ಷಣದಲ್ಲಿಯೇ, ತನ್ನ ನೋಟವೇ ತನ್ನ ಪ್ರಾಣ ಸ್ವರೂಪದ ಮಾಟವಾದ ಕಾರಣದಿಂದ, ಅನಿಮಿಷಯ್ಯನ ಜೀವಕಳೆ ತಾನೂ ತನ್ನ ಇಷ್ಟಲಿಂಗದ ಹಿಂದೆಯೇ ಬಂದು ಪ್ರಭದೇವರಲ್ಲಿ ಐಕ್ಯವಾಯಿತು!

ಗೊಗ್ಗಯ್ಯ ಆ ಅದ್ಭುತವನ್ನು ಕಂಡ: "ಈ ಕೃಪಾಳುವೇ ದೇವನಾಗಿರಬೇಕು. ಅಲ್ಲದಿದ್ದರೆ, ಅನಿಮಿಷಯ್ಯನ ಜೀವಕಳೆಯನ್ನು ಈತ ಹೇಗೆ ಸ್ವೀಕರಿಸಿಯಾನು? ಲಿಂಗ ಹೇಗೆ ಈತನನ್ನು ಕೂಡಬಲ್ಲುದು? ಬೇಕೆಂದೇ, ನನಗೆ ಈ ರಹಸ್ಯದ ರೇಖೆಯನ್ನು ತೋರಿಸುವುದಕ್ಕಾಗಿಯೇ ಈತ ಹೀಗೆ ಬಂದು, ಹೀಗೆ ಮಾಡಿರಬೇಕು!" ಎಂದುಕೊಂಡು, "ಎಲೆ ಮಹಾತ್ಮಾ ನಿನ್ನ ಇಚ್ಚೆಯಿಲ್ಲದೆ ಈ ಗುರುವಿನ ಕಳೆಯಾಗಲಿ ಈ ಲಿಂಗದ ಕಳೆಯಾಗಲಿ ನಿನ್ನಲ್ಲಿ ಬಂದು ಸೇರುವುದು ಅಸಾಧ್ಯ! ಆದ್ದರಿಂದ ನೀನೇ ನಿರುಪಮ ನಿರಾಮಯನಾದ ನಿರಂಜನಮೂರ್ತಿ!" ಎಂದು ಹೊಗಳಿದನು.

"ದಾನಿಯಾದವನು ತಾನು ಕಂಡ ನಿಧಿಯನ್ನು ಸಣ್ಣ ಮನಸ್ಸಿನವನ ಹಾಗೆ ತಾನು ಒಬ್ಬನೇ ತಿಂದುಹಾಕುವುದಿಲ್ಲ. ಅದರಂತೆಯೇ, ನಾನು ಕಂಡ ಶಿವಪಥವನ್ನು ಮನುಷ್ಯರಿಗೆಲ್ಲ ತಿಳಿಸಿಕೊಡುವೆನೆಂಬ ಈ ನಿನ್ನ ರೀತಿ ಬಲು ಲೇಸು. ಇಂಥ ಮಹಾ ಅಭಿಮಾನವುಳ್ಳ ನೀನೇ ಜಗದ ಗುರು!" ಎಂದು ಮತ್ತೆಮತ್ತೆ ಗೊಗ್ಗಯ್ಯ ಪ್ರಭುದೇವರನ್ನು ಹೊಗಳಿದನು.

ಅನಂತರ ಗೊಗ್ಗಯ್ಯ, ನಿಶ್ಚಲವಾಗಿ ನಟ್ಟ ನೋಟದಿಂದ ಇಷ್ಟಲಿಂಗದಲ್ಲಿ ಮನಸ್ಸನ್ನು ನಿಲ್ಲಿಸಿ ಅಭ್ಯಾಸಮಾಡುತ್ತಾ ತನ್ನ ಮನೆಯಲ್ಲಿ ನಿಂತನು. ಪ್ರಭುದೇವರು ತಾವೇ ತಮ್ಮ ಭಕ್ತರ ಗುರುತು ಹಿಡಿದು ಅವರನ್ನು ಪಾವನಮಾಡಲು ಮುಂದೆ ಪಾದ ಬೆಳಸಿದರು.

ಪ್ರಭುದೇವರು ಮುಂದೆ ಮುಕ್ತಾಯಕ್ಕನ ಮನೆಗೆ ಹೋದರು. **ಮುಕ್ತಾಯಕ್ಕ** ಒಬ್ಬಳು ಶಿವಭಕ್ತೆ. ಆಕೆ ಅಜಗಣ್ಣ ಎಂಬ ಮಹಾತ್ಮನ ಒಡನೆ ಹುಟ್ಟಿದವಳು. ಅಜಗಣ್ಣನ ಭಕ್ತಿ ಗುಪ್ತಭಕ್ತಿ; ಎಂದರೆ, ಆತನು ನಿತ್ಯದ ವ್ಯವಹಾರದಲ್ಲಿ ತೊಡಗಿರುತ್ತಿದ್ದುದು ಎಲ್ಲರಿಗೂ ತಿಳಿಯುತ್ತಿತ್ತೇ ಹೊರತು ಆತನು ಸಾಧಿಸುತ್ತಿದ್ದ ಶಿವಭಕ್ತಿ ಅನೇಕರಿಗೆ ಗೊತ್ತಿರಲಿಲ್ಲ.

ಪ್ರಭುದೇವರು ಮುಕ್ತಾಯಿಯ ಮನೆಗೆ ಬರುವ ಕಾಲಕ್ಕೆ ಅಜಗಣ್ಣ ಲಿಂಗೈಕ್ಯದ ಸಮಾಧಿಯನ್ನು ಸಾಧಿಸಿದ್ದ. ಮುಕ್ತಾಯಿ ಅದನ್ನು ಅರಿಯಲಾರದೆ, ಅಜಗಣ್ಣ ಸತ್ತನೆಂದೇ ಭ್ರಮಿಸಿ ಗೋಳಾಡುತ್ತಿದ್ದಳು. ಆ ಹೆಣ್ಣಿನ ಭ್ರಮೆಯನ್ನು ಹೋಗಲಾಡಿಸಿ, ಆಕೆಯ ಕಣ್ಣೀರನ್ನು ಒರಸುವುದಕ್ಕಾಗಿಯೇ ಪ್ರಭು ಅಲ್ಲಿಗೆ ಬಂದದ್ದು.

ಪ್ರಭುವನ್ನು ಕಂಡೊಡನೆಯೇ ಮುಕ್ತಾಯಿ ಅವರನ್ನು ಸತ್ಕರಿಸಿ ಭಕ್ತಿಯಿಂದ ಅವರಿಗೆ ವಂದಿಸಿದಳು. ಪ್ರಭುದೇವರಿಂದ ತನ್ನ ಚಿಂತೆ ಪರಿಹಾರವಾಗುವುದೆಂದು ಆಕೆ ಭರವಸೆಪಟ್ಟಳು.

ಪ್ರಭುದೇವರು ಹೇಳಿದರು: “ತಾಯೆ! ಶಿವಭಕ್ತರಿಗೆ ಚಿಂತೆಗಳೂ ಆಯಾಸಗಳೂ ಆಗಬಾರದು. ಸಾಮಾನ್ಯರಾದ ಲೌಕಿಕರಂತೆ ವ್ಯರ್ಥವಾಗಿ ಹಂಬಲಿಸಿದರೆ ಏನು ಫಲ? ದೇಹದ ಸಂಬಂಧವನ್ನು ಕಳೆದುಕೊಂಡ ಅಜಗಣ್ಣನಿಗಾಗಿ ಕಣ್ಣೀರಿಡಬಾರದು. ಅಳಬೇಡ ಮುಕ್ತಾಯಿ, ಅಜಗಣ್ಣ ಸತ್ತಿಲ್ಲ. ಅಜಗಣ್ಣ ಶಿವಭಕ್ತ. ಶಿವಭಕ್ತನಿಗೆ ಸಾವಿಲ್ಲ. ಅಳಬೇಡ ಮುಕ್ತಾಯಿ.”

ಪ್ರಭು ಏನು ಹೇಳಿದರೂ ಮುಕ್ತಾಯಿಗೆ ಸಮಾಧಾನ ಬೇಗ ಬರಲಿಲ್ಲ. ಅಜಗಣ್ಣನೇ ಆಕೆಯ ಸರ್ವ ಸಂಪತ್ತು. ಅಜಗಣ್ಣನನ್ನು ಬಿಟ್ಟು ಆಕೆ ಬದುಕಲಾರಳು. ಅಜಗಣ್ಣ ಹೋದ ಮೇಲೆ ತನ್ನ ಗತಿ ಏನು ಎಂದು ಆಕೆಗೆ ದುಃಖ.

ಪ್ರಭು ಆಕೆಗೆ ಅಜಗಣ್ಣನ ಗುಪ್ತ ಶಿವಭಕ್ತಿಯನ್ನು ವರ್ಣಿಸಿದರು, “ಆತನು ಇರುವಾಗ ಎಲ್ಲರೊಡನೆಯೂ ಸೇರಿ ಓಡಾಡಿದ ಹಾಗೆ ತೋರಿದರೂ ಆತನ ಜೀವ

ಮಾತ್ರ ಶಿವನಲ್ಲಿ ಓಡಾಡುತ್ತಿತ್ತು. ಆದ್ದರಿಂದ, ಅಜಗಣ್ಣ ಆಗ ಬದುಕಿದ್ದ ಎಂದು ಹೇಳುವ ಹಾಗಿಲ್ಲ, ಈಗ ಸತ್ತಿದ್ದಾನೆ ಎಂದು ಹೇಳುವ ಹಾಗಿಲ್ಲ"—ಎಂಬುದಾಗಿ ಪ್ರಭು ಮುಕ್ತಾಯಿಗೆ ಸಮಾಧಾನ ಹೇಳಿದರು.

"ಗುರುವೇ! ನಿಮ್ಮವರ ರೀತಿ ನಿಮಗೇ ಗೊತ್ತು. ಹಾವಿನ ಹಜ್ಜೆಯ ಗುರುತು ಹಾವುಗಳಿಗೆ ಗೊತ್ತು. ಅದು ಹಾಗಿರಲಿ. ಮುಂದೆ ನನಗೇನು ಗತಿ? ನಾನು ಮಾಡತಕ್ಕದ್ದು ಏನು?" ಎಂದು ಮುಕ್ತಾಯಿ ವಿಜ್ಞಾಪನೆ ಮಾಡಿದಳು.

ಪ್ರಭು ಆಕೆಯ ಪ್ರಶ್ನೆಗೆ ಪ್ರೀತಿಪಟ್ಟು, ಹೇಳಿದರು: "ಮುಕ್ತಾಯಿ, ನಿನ್ನ ಹೆಸರಿಗೆ ತಕ್ಕ ಬಯಕೆಯನ್ನೇ ನೀನು ಬಯಸಿದೆ. ಈ ಸಂಸಾರದ ಭಾರಕ್ಕೆ ಸಿಕ್ಕಿದವರು ಲಿಂಗಮಾರ್ಗವನ್ನು ಅರಿಯಲಾರರು. ಈ ಇಲ್ಲಿಯ ಹೋರಾಟವನ್ನೆಲ್ಲಾ ದಾಟಿ ಸುಖ ಪಡುವುದನ್ನು ಕಲಿಯಬೇಕು. ಹೊಳೆಯನ್ನು ದಾಟಬೇಕೆನ್ನುವವರು ಹರಿಗೋಲನ್ನು ಹರಿಯದ ಹಾಗೆ ಕಾಪಾಡಿಕೊಳ್ಳುವ ರೀತಿಯಲ್ಲಿ, ಶಿವನನ್ನು ತಿಳಿಯಬೇಕೆನ್ನುವವರು ಕರ್ಮೇಂದ್ರಿಯಗಳನ್ನು ಅಡಗಿಸಿಕೊಂಡು ಅಂತರ್ಮುಖಿಗಳಾಗಬೇಕು. ಇದೇ ಶಿವಭಕ್ತಿ. ಕೇಳು ಮುಕ್ತಾಯಿ: ಮಕ್ಕಳಿಗೆ ತಾಯಿಯ ಹಾಲೇ ಸಹಜವಾದ ಆಹಾರವಾದರೂ, ಅವುಗಳಿಗೆ ಎರೆಹಾಲನ್ನು ಹುಯ್ಯುತ್ತಾ, ಸ್ವಲ್ಪಸ್ವಲ್ಪವಾಗಿ ಅನ್ನ ಉಣ್ಣುವುದನ್ನು ಕಲಿಸಿ ಆ ಮಕ್ಕಳನ್ನು ಸಮರ್ಥರನ್ನಾಗಿ ಮಾಡುವ ಉಪಾಯದಂತೆಯೇ—ಕೊಂಚಕೊಂಚವಾಗಿ ಹೊರಗಿನ ಲೋಕದ ಸಂಬಂಧವನ್ನು ಕಳೆದುಕೊಳ್ಳುತ್ತ ಅಂತರ್ ಜ್ಞಾನವನ್ನು ಬಲಪಡಿಸಿಕೊಳ್ಳಬೇಕು. ಇದೇ ನಿಜವಾದ ಶಿವಭಕ್ತಿ."

ಪ್ರಭು ಹೇಳಿದ ಆ ಮಾತುಗಳನ್ನು ಕೇಳಿ, ಮುಕ್ತಾಯಿಯ ಅಜ್ಞಾನ ಆರಿತು ದುಃಖ ಶಮನವಾಯಿತು, ಚಿತ್ತದಲ್ಲಿ ಸಮತೆ ಬಂದು ನೆಲಸಿತು. ಹೀಗೆ ನಿತ್ಯಸುಖವನ್ನು ಪಡೆಯುವ ದಾರಿ ಯಾವುದೆಂದು ಮುಕ್ತಾಯಿಗೆ ಉಪದೇಶಮಾಡಿ, ಪ್ರಭುದೇವರು ಮುಂದೆ ಸೊನ್ನಲಾಪುರಕ್ಕೆ ತೆರಳಿದರು.

ಪ್ರಭು ಸೊನ್ನಲಾಪುರಕ್ಕೆ ಬಂದರು. ಆಗ ಅಲ್ಲಿ ಸಿದ್ಧರಾಮಯ್ಯನ ಶಿಷ್ಯರನೇಕರು ಮಣ್ಣು ಹೊರುತ್ತಾ, ಬಂಡಿ ಹೊಡೆಯುತ್ತಾ, ಕಲ್ಲು ಒಡೆಯುತ್ತಾ ಇದ್ದರು. **ಸಿದ್ಧರಾಮಯ್ಯ** ಕಟ್ಟಿಸುತ್ತಿದ್ದ ಒಂದು ಶಿವದೇವಾಲಯದ ಸೇವೆಗೆ ಅವರೆಲ್ಲಾ ಸಹಾಯ ಮಾಡುತ್ತಿದ್ದರು.

ಪ್ರಭು ಬೆರಗಾಗಿ ನೋಡಿದರು: "ನೂಲಿನ ಸಂಕೋಲೆಯನ್ನು ಕತ್ತರಿಸಿ, ಚಿನ್ನದ ಕೋಳವನ್ನು ಕಾಲಿಗೆ ಬಿಗಿದುಕೊಳ್ಳುವ ಬುದ್ಧಿಹೀನನ ಹಾಗೆ ನಮ್ಮ ಸಿದ್ಧರಾಮಯ್ಯನು ಹೆಂಡಿರು ಮಕ್ಕಳ ಸಂಬಂಧ ಬೇಡವೆಂದು ಸಂಸಾರವನ್ನು ಬಿಟ್ಟು ಸಂನ್ಯಾಸಿಯಾದರೂ ಪುನಃ ಹೀಗೆ ತೊಡಗಿದನಲ್ಲಾ! ಚಿಕ್ಕಸಂಸಾರವನ್ನು ಬಿಟ್ಟು, ಖ್ಯಾತಿ ಪೂಜೆ ಲಾಭಗಳನ್ನು ಬಯಸಿ ದೊಡ್ಡಸಂಸಾರಕ್ಕೆ ಸಿಕ್ಕಿ ಬಿದ್ದನಲ್ಲಾ! ಸಿದ್ಧರಾಮನಿಗೇ ಈ ಗತಿಯಾದರೆ, ಮಿಕ್ಕ ಸಂಸಾರಿಗಳ ಗತಿ ಏನು!"

ಆಗ ಪ್ರಭುದೇವರು "ಈ ಒಡ್ಡರಾಮನು ಇದೇನು ಗೊಡವೆಯನ್ನು ಒಡ್ಡಿಕೊಂಡನು? ಇದರಿಂದ ಇವನ ಮನಸ್ಸು ವೃಥಾ ಗೊಡ್ಡಾಯಿತಲ್ಲಾ?" ಎಂದು ಆ ಶಿಷ್ಯರನ್ನು ಕೇಳಿದರು. "ನಮ್ಮ ಗುರುವನ್ನು ಒಡ್ಡನೆಂದು ಹೀಯ್ಯಾಳಿಸುತ್ತೀಯಾ?" ಎಂದು ಆ ಶಿಷ್ಯರು ಅವರ ಮೇಲೆ ಬಿದ್ದರು. ಅದಕ್ಕೆ ಪ್ರಭು ಹೇಳಿದರು: "ಅಯ್ಯೋ! ನಿಮ್ಮ ಗುರುವಿನ ಶಿವಮಾರ್ಗ ಕಲ್ಲಿಗೆ ಬಂದಿತಲ್ಲವೇ! ಬುದ್ಧಿ ಇಲ್ಲದ ಸಿದ್ಧನನ್ನು ನಂಬಿ, ಅವನಿಗೆ ಶಿಷ್ಯರಾದಿರಿ! ಕಲ್ಲನ್ನು ಕಡಿದು, ಕಲ್ಲಿನ ಮೇಲೆ ಕಲ್ಲಿಟ್ಟು, ದೇಗುಲವನ್ನು ಮಾಡಿಸುವವರು ಒಡ್ಡರಲ್ಲದೆ ಸಿದ್ಧರಲ್ಲ!"

ಶಿಷ್ಯರಿಗೆ ಇನ್ನೂ ಕೋಪ ಬಂತು. "ನೋಡಿದೆಯಾ, ನೋಡಿದೆಯಾ! ಪುನಃ, ಅದೇ ಕಲಿತ ಮಾತನ್ನು ಅಡಿ, ಹುಚ್ಚನಂತೆ ಹರಟುತ್ತಿದ್ದೀಯೆ! ಇನ್ನೊಂದು ಸಲ ನಮ್ಮ ಗುರುವನ್ನು ಹೀಯ್ಯಾಳಿಸಿದರೆ, ನೀನು ಅನ್ಯಾಯವಾಗಿ ಕೆಟ್ಟುಹೋಗುವೆ" ಎಂದರು. ಅದಕ್ಕೆ ಪ್ರಭು "ನೀವು ಶಿಷ್ಯರು ನಿಮ್ಮೊಡನೆ ಏನು ಮಾತು? ನಿಮ್ಮ ಗುರುವನ್ನು ಕರೆತನ್ನಿ,

ಆತನ ಸಾಮರ್ಥ್ಯವನ್ನು ನೋಡೋಣ. ಒಡ್ಡರಾಮನ ರೀತಿಯ ಅನುಭವವೂ ಆಗಲಿ?" ಎಂದು ಆ ಶಿಷ್ಯರಿಗೆಲ್ಲಾ ಕೋಪ ಕೆರಳುವಂತೆ ಹೇಳಿದರು.

ಆಗ ಆ ಶಿಷ್ಯರೆಲ್ಲರೂ ಒಂದು ಹಿಂಡಾಗಿ ಪ್ರಭುವಿನ ಮೇಲೆ ಬಂದು ನುಗ್ಗಿದರು. "ಇವನನ್ನು ಕೆಡವಿಕೊಳ್ಳಿ! ನಮ್ಮ ಸ್ವಾಮಿಯನ್ನು ಹೀಯ್ಯಾಳಿಸಿ, ಇವನು ಸುಮ್ಮನೆ ಹೋಗಲು ಬಿಡುವೆವೇ!" ಎನ್ನುತ್ತ ಬಂದು, ತಮ್ಮ ತೋಳುಗಳಲ್ಲಿ ಪ್ರಭುವನ್ನು ಬಂಧಿಸಲು ತಬ್ಬಿದರು. ಆದರೆ ಅವರ ಕೈಗೆ ಬರಿಯ ಬಯಲು ಸಿಕ್ಕಿತೇ ಹೊರತು, ಕಣ್ಣಿಗೆ ಕಂಡ ದೇಹ ಸಿಕ್ಕಲಿಲ್ಲ! ಶಿಷ್ಯರಿಗೆಲ್ಲಾ ಆಶ್ಚರ್ಯವಾಯಿತು. ಆದರೂ ಅವರ ಕೋಪ ಇಳಿಯಲಿಲ್ಲ. ಕೈಗೆ ಸಿಕ್ಕಿದ ಕಲ್ಲುಗಳನ್ನು ಎತ್ತಿಕೊಂಡು ಪ್ರಭುದೇವರ ಕಡೆಗೆ ಬೀರಿದರು. ಒಂದು ಕ್ಷಣದಲ್ಲಿ ಆ ಕಲ್ಲುಗಳ ರಾಶಿ ಪ್ರಭುದೇವರನ್ನು ಹೂಳಿಬಿಟ್ಟಿತು; ಮರುಕ್ಷಣದಲ್ಲಿಯೇ ಪ್ರಭು ಅದೇ ಕಲ್ಲಿನ ರಾಶಿಯ ಮೇಲೆ ನಿರ್ಲೇಪರಾಗಿ ನಗುತ್ತ ನಿಂತಿದ್ದರು! ಶಿಷ್ಯರು ಅವರ ಮೇಲೆ ಏನೇನೇ ಕೈ ಮಾಡಿದರೂ, ನೆರಳಿನೊಡನೆ ಕಾಳಗ ಮಾಡುವವರಂತೆ ಅವರಿಗೇ ವ್ಯಥಾ ಆಯಾಸವಾಯಿತಲ್ಲದೆ, ಪ್ರಭುವಿನ ಮೇಲೆ ಅದರ ಪರಿಣಾಮ ಏನೇನೂ ಆಗಲಿಲ್ಲ!

ಆ ದೃಶ್ಯವನ್ನು ನೋಡುವುದಕ್ಕೇ ಜನ ಲಕ್ಷ ಸಂಖ್ಯೆಯಲ್ಲಿ ಸೇರಿತು. "ಈತ ಯಾರಿರಬಹುದು? ವಿಷ್ಣುವಾಗಿದ್ದರೆ ಚಕ್ರವನ್ನು ತಿರುಗಿಸಿ ಹೊಡೆಯುತ್ತಿದ್ದನು! ರುದ್ರನಾಗಿದ್ದರೆ ಹಣೆಗಣ್ಣನ್ನು ತೆರೆದು ಸುಡುತ್ತಿದ್ದನು! ಆದರೆ ಈತನು ತನ್ನ ಶತ್ರುಗಳನ್ನೂ ನೋಯಿಸುವುದಿಲ್ಲ, ತಾನೂ ಕೆರಳುವುದಿಲ್ಲ!" ಎಂದು ಆ ಜನ ಪ್ರಭುವಿನ ಮಹಿಮೆಗೆ ವಶರಾಗಿ, "ಶರಣು! ಶರಣು!" ಎನ್ನುತ್ತಿದ್ದರು.

ಈ ಮಧ್ಯೆ ಒಬ್ಬ ಜಂಗಮನು "ನಮ್ಮ ಸಿದ್ಧನನ್ನು ಹೀಯ್ಯಾಳಿಸಿದವನಿಗೆ ಶಿಕ್ಷೆ ಮಾಡಿಸುವವರೆಗೂ ನಮ್ಮ ಕೋಪ ಆರುವುದಿಲ್ಲ" ಎನ್ನುತ್ತಾ ಓಡಿಬಂದು, "ಯಾವನೋ ಒಬ್ಬ ಜಂಗಮನು ಸುಮ್ಮನೆ ಬಂದು ನಿಮ್ಮನ್ನು ಹೀನೈಸಿ ಹಳಿದು ನುಡಿದನು." ಎಂದು ಸಿದ್ಧರಾಮನಿಗೆ ಹೇಳಿದನು.

ಅದು ಕೇಳಿ ಸಿದ್ಧ ರಾಮಯ್ಯನು ಉರಿದೆದ್ದನು. "ಯಾರು ನಮ್ಮನ್ನು ಜರೆದವನು? ಇಂದ್ರನೋ? ವಿಷ್ಣುವೋ? ರುದ್ರನೋ? ಅವನನ್ನು ತೋರಿಸು. ಅವನ ತಲೆಯ ಮೇಲೆ ಉಗಿಯುತ್ತೇನೆ. ಅವನ ನಾಲಿಗೆಯನ್ನು ಬೇರು ಸಹಿತವಾಗಿ ಕೀಳುತ್ತೇನೆ." ಎಂದು ಗರ್ಜಿಸುತ್ತಾ ಬಂದನು.

ಪ್ರಭು ಅವನನ್ನು ನೋಡಿ, "ಬಹಳ ಒಳ್ಳೆಯದಾಯಿತು ಸಿದ್ಧರಾಮಯ್ಯ! ಸಂನ್ಯಾಸಿಯಾದ ನಿನಗೆ ಸಂಸಾರಿಗಳಿಗಿಂತ ಸಾವಿರ ಪಾಲು ಹೆಚ್ಚು ಸಿಟ್ಟು ಆಗಬಹುದೇ?" ಎಂದು ನಕ್ಕರು.

ಅದಕ್ಕೆ ಸಿದ್ಧರಾಮಯ್ಯನು "ಸಾಕು, ಸಾಕು. ಮಹೇಂದ್ರಜಾಲವನ್ನು ಕಲಿತುಬಂದು, ನಮ್ಮ ಶಿಷ್ಯರನ್ನು ಗೋಳಾಡಿಸಿದಂತೆ ನಮ್ಮಲ್ಲಿ ನಡೆಯಲಾರದು." ಎಂದನು.

ಅದಕ್ಕೆ ಪ್ರಭು ಹೇಳಿದರು: "ಸಂಸಾರವನ್ನು ಬಿಟ್ಟು ಸಂನ್ಯಾಸಿಯಾದವನಿಗೆ ಈ ಕೋಪ ಉಚಿತವೇ, ರಾಮಯ್ಯ? ನಿಮ್ಮ ಸಂಪ್ರದಾಯದಲ್ಲಿ ಕೋಪ ಶಾಶ್ವತವೇನು?"

ಆಮಾತು ಕೇಳಿ ರಾಮಯ್ಯನು ಇನ್ನೂ ರೇಗಿ, "ನಮ್ಮ ಸಂಪ್ರದಾಯದ ಸುದ್ದಿ ನಿನಗೇಕೆ? ನನ್ನನ್ನು ಸಾಮಾನ್ಯನೆಂದು ಎಣಿಸಿ, ನೀನು ಬಾಯಿಗೆ ಬಂದಂತೆ ಆಡಿದರೆ, ನನ್ನ ಹಣೆಯ ಕಣ್ಣಿನ ಕಿಡಿಯನ್ನು ಕೆದರುತ್ತೇನೆ, ಜೋಕೆ!" ಎಂದನು.

ಪ್ರಭು ಅದಕ್ಕೂ ನಗುತ್ತಾ, "ಓಹೋ! ಹಣೆಗಣ್ಣಿನ ಉರಿಯಲ್ಲಿ ಇದುವರೆಗೆ ಎಷ್ಟು ಜನರನ್ನು ಕೊಂದಿದ್ದೀಯೋ! ನಿಜವೇ, ನೀನು ಹಿಂಸಾಧರ್ಮ ಕರ್ಮದಲ್ಲಿ ಯೋಗಿಯಾದವನು. ನೀನು ರಾಗದಿಂದ ಉರಿದುಹೋಗುತ್ತಿರುವ ಭವರೋಗಿ. ನಿನ್ನಲ್ಲಿ ಮಾತನಾಡುವುದು ನಮಗೆ ಆಗದು." ಎಂದರು.

ಸಿದ್ಧರಾಮಯ್ಯನ ಸ್ಶೈರಣೆ ಮುಗಿದುಹೋಯಿತು. ರೋಷವನ್ನು ತಡೆಯಲಾರದೆ ಹಣೆಗಣ್ಣನ್ನು ತೆರೆದನು. ತೆರೆದರೆ, ಸಿಡಿಲಿನ ಕಿಡಿಗಳು ಹೊರಗೆ

ಚೆಲ್ಲಿದವು. ಆದರೂ ಅವು ಒಂದೂ ಪ್ರಭುದೇವರ ಪಾದಗಳ ಬಳಿ ಕೂಡ ಬಾರದೆ, ಸುತ್ತ ನೋಡುತ್ತ ನಿಂತಿದ್ದವರನ್ನೆಲ್ಲಾ ಸುಡತೊಡಗಿದುವು. ಆಗ ಆ ಜನ "ಅಯ್ಯಯ್ಯೋ! ಶಿವ ಶಿವಾ! ಸಿದ್ಧರಾಮಯ್ಯನು ತನ್ನ ಅಳತೆಯನ್ನು ತಿಳಿಯದೆ, ಈ ಪರಮಪುರುಷನ ಸಂಗಡ ಜಗಳವನ್ನು ಕಟ್ಟಿಕೊಂಡನಲ್ಲಾ! ಬಡವನ ಕೋಪ ದವಡೆಗೆ ಕೇಡು ತರುವ ಹಾಗೆ ಇವನ ಹಣೆಗಣ್ಣಿನ ಉರಿ ಇವನ ಊರನ್ನೇ ಸುಡುತ್ತಿದೆಯಲ್ಲಾ!" ಎಂದು ಕೂಗಿಕೊಂಡರು.

ಹಿಂದೆ ಕಡಲನ್ನು ಕಡೆದಾಗ, ಹಾಲಾಹಲ ವಿಷವು ಜಗತ್ತನ್ನು ಸುಡುತ್ತಾ ಬಂದ ಸಂದರ್ಭದಲ್ಲಿ ಶಿವನು ಅದನ್ನು ತಡೆದು ಲೋಕವನ್ನು ರಕ್ಷಿಸಿದ ಹಾಗೆ ಪ್ರಭುದೇವರು ಒಂದೇ ನಿಮಿಷದಲ್ಲಿ ಸಿದ್ಧರಾಮಯ್ಯನ ಹಣೆಗಣ್ಣಿನ ಉರಿಯನ್ನು ತಡೆದು, ಸೊನ್ನಲಾಪುರದ ಜನರನ್ನು ಕೃಪೆಯಿಂದ ಕಾಪಾಡಿದರು.

ಸಿದ್ಧರಾಮಯ್ಯನಿಗೆ ಆಗ ಜ್ಞಾನೋದಯವಾಯಿತು. "ಕೋಪವಿಲ್ಲದೆ, ಕಾಮನಿಲ್ಲದೆ, ಇಷ್ಟು ಶಾಂತನಾದ ಈತನು ಯಾರು? ಬೇರೆ ಯಾರೂ ಅಲ್ಲ, ಈತನು ಖಂಡಿತವಾಗಿಯೂ ನನ್ನ ಇಷ್ಟದೈವವಾದ ಕಪಿಲಸಿದ್ಧ ಮಲ್ಲಿಕಾರ್ಜುನನೇ ಹೌದು! ಅಯ್ಯೋ, ನನಗಿಂತ ಕುರಿಗಳು ಕೂಡ ಎಷ್ಟೋ ವಾಸಿ, ಕಾಪಾಡಿದ ಒಡೆಯನು ಬಂದರೆ ಕೂಡಲೆ ಗುರುತು ಹಿಡಿಯುತ್ತವೆ. ನನ್ನನ್ನು ರಕ್ಷಿಸುವ ನನ್ನ ಸ್ವಾಮಿ ಬಂದರೆ ನಾನು ಅರಿಯದೆ ಹೋದೆನಲ್ಲಾ!" ಎಂದು ಮರುಗಿದನು. "ಕರುಣಾಕರನೆ, ಕಾಪಾಡಬೇಕು. ಸರ್ವದ್ರೋಹವೂ ನನ್ನದೇ. ನಿನ್ನನ್ನು ಅರಿಯದೆಹೋದ ನನ್ನ ಅವಗುಣವನ್ನು ಇಷ್ಟೆಂದು ಊಹಿಸಲೂ ಆಗದು. ಇದನ್ನು ನೀನು ಮರೆತು ನನ್ನನ್ನು ಕಾಪಾಡಬೇಕು" ಎಂದು ಮತ್ತೆ ಮತ್ತೆ ಪ್ರಭುವಿನ ಪಾದಗಳಿಗೆ ಎರಗಿದನು.

ಪ್ರಭುವಾದರೋ ಸರ್ವಜೀವಗಳಲ್ಲಿಯೂ ದಯೆ ಬೀರುವವರು. "ಈ ಮೂರ್ಖನ ಗುಣಗಳಿಗೆ ಏನು ಮಾಡಲಿ!" ಎಂದು ನಸುನಗುತ್ತ, ತಾವೇ ಬಗ್ಗಿ ಅವನನ್ನು ತಬ್ಬಿ ಹಿಡಿದು ಮೇಲೆತ್ತಿದರು. "ಏಳು, ವತ್ಸ! ನಿನ್ನ ಮರುಕ ಸಾಕು. ನನಗೆ ನಿನ್ನ ಮೇಲೆ ಏನೂ ಕೋಪವಿಲ್ಲ" ಎಂದರು.

ಸಿದ್ದರಾಮಯ್ಯನಿಗೆ ಸ್ವಲ್ಪ ಜೀವ ಬಂತು. “ನನ್ನ ಭಾಗದ ದೇವರೆ! ನೀವು ಹೀಗೆ ಸಾಮಾನ್ಯ ಜಂಗಮರ ವೇಷ ಹಾಕಿಕೊಂಡು ಬಂದರೆ, ಅರಿಯದವರು ನಾವು ಹೇಗೆ ನಿಮ್ಮ ಗುರುತು ಹಿಡಿಯ ಬೇಕು? ಯಾರೋ ಇಂದ್ರಜಾಲದವನು ಎಂದುಕೊಂಡು ಇಷ್ಟೆಲ್ಲಾ ಆಯಾಸಪಡಿಸಿದೆವು. ಕ್ಷಮಿಸಬೇಕು.” ಎಂದನು.

ಆ ಮಾತು ಕೇಳಿ, ಪ್ರಭುದೇವರು ಹೇಳಿದರು: “ರಾಮಯ್ಯ! ಕೆಲವರು ’ಚರಾಚರಗಳಿಗೆಲ್ಲ ಒಳ್ಳೆಯದಾಗಲಿ’ ಎಂದು ಹರಸುವುದು ಬಿಟ್ಟು, ಪಕ್ಷಪಾತದಿಂದ, ’ದೊಡ್ಡವರಿಗೆ ಮಾತ್ರ ಶಾಂತಿಗಳಾಗಲಿ’ ಎಂದು ಅಷ್ಟೇ ಹರಸುತ್ತಾರೆ. ಹೀಗೆ ಹಿರಿಯರನ್ನು ಅಷ್ಟೇ ಸತ್ಕರಿಸಿ, ಮಿಕ್ಕಾದವರನ್ನು ಧಿಕ್ಕರಿಸುವುದು ಯೋಗೀಶ್ವರರಿಗೆ ಉಚಿತವಲ್ಲ!”

ಸಿದ್ಧರಾಮಯ್ಯನು ತನ್ನ ತಪ್ಪನ್ನು ಒಪ್ಪಿಕೊಂಡನು. ಹೌದು, ಈ ಉತ್ತಮ, ಅಧಮ ಎಂಬ ಪಕ್ಷಪಾತದ ಭ್ರಮೆಗಳು ಇನ್ನೂ ತನ್ನ ಮನಸ್ಸಿನ ತುಂಬ ಉಂಟು. ಸರ್ವರನ್ನೂ ಸಮಚಿತ್ತದಿಂದ ಕಾಣುವುದು, ತಿಳಿಯುವುದು ತನಗಿನ್ನೂ ಬಂದಿಲ್ಲ. ಆ ಬುದ್ಧಿಯನ್ನು ತನ್ನ ಗುರುವೇ ತನಗೆ ಒಲಿದು ಕಲಿಸಿಕೊಡಬೇಕು.

ಪ್ರಭು ಆತನಿಗೆ ಧೈರ್ಯ ಹೇಳಿದರು: “ಈ ಸಮಬುದ್ಧಿ ಎಂಬುದು ಇದ್ದಕ್ಕಿದ್ದಂತೆ ಆಗತಕ್ಕದ್ದಲ್ಲ. ಇದು ಮೆಲ್ಲಮೆಲ್ಲನೆ ಬೆಳಸಬೇಕಾದ್ದು. ಚಿತ್ತವನ್ನು ಶುದ್ಧಿಮಾಡಿಕೊಳ್ಳುತ್ತ, ಯೋಗ ಮಾರ್ಗವನ್ನು ತಿಳಿದು, ವಿಯೋಗಿಯಾದರೆ, ಅಂಥವನಿಗೆ ಸಮತೆ ಸ್ವಾಧೀನವಾಗುತ್ತದೆ” ಎಂದರು.

ಸಿದ್ಧರಾಮನಿಗೆ ತನ್ನ ಗುರು ತನ್ನ ಮನೆಗೆ ಬಂದರಲ್ಲಾ ಎಂದು ತುಂಬ ಸಂಭ್ರಮ, ಆ ಗುರುವಿಗೆ ಸತ್ಕಾರಮಾಡಬೇಕೆಂದು ತವಕ. “ಗುರುವೆ! ನಿಮ್ಮ ದರ್ಶನವೂ ನಿಮ್ಮ ಸ್ಪರ್ಶನವೂ ನನಗೆ ಆದ ಬಳಿಕ, ನನಗೆ ಯಾವುದು ತಾನೆ ಅಸಾಧ್ಯ? ಅದು

ಹಾಗಿರಲಿ. ಈಗ ನನ್ನ ಮಠಕ್ಕೆ ದಯಮಾಡಿಸಿ, ಮಲ್ಲಿಕಾರ್ಜುನನನ್ನು ದರ್ಶನ ಮಾಡಿ, ಬನ್ನಿ," ಎಂದು ಕರೆದನು.

ಪ್ರಭು ಅದಕ್ಕೆ ಹೇಳಿದರು: "ಬಿಡು, ಹುಚ್ಚ. ಎಲ್ಲಾ ಕಡೆಗಳನ್ನೂ ಒಂದೇ ಸಮನೆಂದು ಭಾವಿಸಿ ಸಂಚಾರಮಾಡುವ ಮಹಾತ್ಮನಿಗೆ ಮನೆಯೇನು, ಮಠವೇನು? ಆತನಿಗೆ ಊರೇನು, ಅಡವಿಯೇನು? ಆತ ನುಡಿದದ್ದೇ ಶಿವತತ್ತ್ವ! ಆತ ನಡೆದದ್ದೇ ಶಿವಮಾರ್ಗ! ಇಲ್ಲಿ ಬಾ. ಶರಣರ ಬದುಕಿನ ತೊಡಕನ್ನು ನಿನಗೆ ವಿವರಿಸಿಕೊಡುತ್ತೇನೆ." ಎಂದು ಪ್ರಭು ಸಿದ್ಧರಾಮಯ್ಯನನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡರು. ಆತನ ಕೈಯನ್ನು ಹಿಡಿದು, ಹೆತ್ತ ತಂದೆ ಮಗನಿಗೆ ಒಳ್ಳೆಯ ಮಾತಿನಿಂದ ಬುದ್ಧಿ ಹೇಳುವಂತೆ ಸಿದ್ದರಾಮಯ್ಯನ ಚಿತ್ತವನ್ನು ತಿದ್ದಿದರು.

"ಮನಸ್ಸು ಕೊಟ್ಟು ಕೇಳು, ರಾಮಯ್ಯ. ನನಗೆ ಹೆಸರು ಬರಬೇಕು, ನನಗೆ ಪೂಜೆಯಾಗಜೇಕು, ನನಗೆ ಲಾಭ ದೊರಕಬೇಕು ಎಂಬ ಆಸೆಯಿಂದ ದಾನ ಧರ್ಮಗಳನ್ನು ಮಾಡಬಾರದು. ಹಾಗೆ ಮಾಡಿದರೆ, ಬಿತ್ತಿದ ಬೆಳೆಯನ್ನು ತಂದು ತಿಂದು ಮುಗಿಸಿದ ಹಾಗೆ, ದೊರಕಿದ ಖ್ಯಾತಿ ಪೂಜಾ ಲಾಭಗಳಿಂದ ಅಷ್ಟೇ ಸ್ವಲ್ಪವೇ ತೃಪ್ತಿ. ಅದರಿಂದ ಮುಕ್ತಿ ಉಂಟಾಗದು. ಈಗ, ನೀನಾದರೂ, ನೋಡು: ಹೆಂಡತಿ ಮಕ್ಕಳು ತಾಯಿ ತಂದೆ ಎಂಬ ಮೋಹವನ್ನು ತೊರೆದು ಯತಿಯಾದೆ. ಆದರೂ ಸುಖವಾಗಿ ಕೆರೆ ತೋಟ ಬಾವಿ ದೇಗುಲ ಇವುಗಳನ್ನು ರಚಿಸುವುದರಲ್ಲಿ ಆಸಕ್ತನಾಗಿದ್ದೀಯೆ. ಇದು ಖಂಡಿತವಾಗಿಯೂ ಮುಕ್ತಿಯನ್ನು ಪಡೆಯುವ ಮಾರ್ಗವಲ್ಲ. ಯಾವಾಗಲೂ ಈ ಹೊರಗಿನ ಕಾರ್ಯಗಳಲ್ಲೇ ಮನಸ್ಸು ಸಿಕ್ಕಿಕೊಂಡಿದ್ದರೆ, ಅಂತರಂಗ ಹಾಳುಬಿದ್ದುಹೋಗುತ್ತದೆ. ಆಗ ಅಲ್ಲಿಗೆ ಮಾರಿ ಬಂದು ಮನೆಮಾಡುತ್ತಾಳೆ, ಮೈಯನ್ನೂ ಮನಸ್ಸನ್ನೂ ಹೀರಿ ಹಿಪ್ಪೆಮಾಡಿ ಬಿಡುತ್ತಾಳೆ. ಅನಂತರ ಸುಖವೆಂಬುದು ಎಲ್ಲಿಂದ ಬಂತು? ಆದ ಕಾರಣದಿಂದ, ಸಾವನ್ನು ತಪ್ಪಿಸಿಕೊಳ್ಳಬೇಕು ಎಂಬವರು, ಮುಕ್ತಿಯ ದಾರಿಯನ್ನು ಕಾಣಬೇಕು ಎನ್ನುವವರು, ನಿತ್ಯರಾಗುವ ರೀತಿಯನ್ನು ತಿಳಿಯಬೇಕು

ಎನ್ನುವವರು ಸದಾ ಮಾಡಬೇಕಾದ ಕರ್ತವ್ಯ ಒಂದೇ! ಅದು ಏನೆಂದರೆ: ರಾಮಯ್ಯ, ಹೊಲವನ್ನು ಹಸನು ಮಾಡಿ, ಹೆಂಟೆಯೊಡೆದು, ಅದರಲ್ಲಿ ಕಸವನ್ನು ಬುದ್ಧಿವಂತರು ಬಿತ್ತುತ್ತಾರೆಯೆ? ಅದರಂತೆ ಅಂತರ್ಮುಖಿಯಾಗಿ ಕೆಲಸ ಮಾಡುವುದಕ್ಕೆ ತಕ್ಕ ಸಾಮರ್ಥ್ಯವಿರುವ ಈ ನಿನ್ನ ಮೈಯನ್ನೂ ನಿನ್ನ ಮನಸ್ಸನ್ನೂ ಈ ಬಹಿರಂಗದ ಕೆಲಸಗಳಿಗೆ ಬೇಯಿಸಿ ಹಾಕುವುದು, ಇದು ವ್ಯರ್ಥ, ರಾಮಯ್ಯ. ನೀನು ತಿಳಿದವನು, ರಾಮಯ್ಯ. ಕೆಟ್ಟ ಕುದುರೆಗಳಿಗಾದರೆ, ಅತ್ಯಂತವಾದ ಶಿಕ್ಷೆಗಳಾಗಬೇಕು; ಒಳ್ಳೇ ಜಾತಿ ಕುದುರೆಗಾದರೋ ಉತ್ತಮನಾದ ಸವಾರನ ತೊಡೆ ಸ್ವಲ್ಪ ಸೋಕಿದರೂ ಸಾಕು! ಅದರ ಹಾಗೆ, ನಿನಗೆ ಹೆಚ್ಚು ಹೇಳಬೇಕಾದ ಅಗತ್ಯವಿಲ್ಲ. ನೀನು ಸಂಸ್ಕಾರ ಹೊಂದಿದ ಜೀವ, ರಾಮಯ್ಯ!"

ಹೀಗೆಂದು ಪ್ರಭು ಹೇಳಿ, ಅನಂತರ ರಾಮಯ್ಯನನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು, ಆತನಿಗೆ ಇನ್ನೂ ರಹಸ್ಯದ ಸಂಗತಿಗಳನ್ನು ತಿಳಿಯಹೇಳಿದರು. ಹೊರಗಿನ ಕೆಲಸಗಳಲ್ಲಿ ಹರಿದುಹೋಗುವ ಇಂದ್ರಿಯವ್ಯಾಪಾರವನ್ನು ತಡೆದಿಡುವುದು ಹೇಗೆ, ಜೀವವನ್ನು ದೇಹದಿಂದ ಬೇರ್ಪಡಿಸುವುದು ಹೇಗೆ, ಆ ಜೀವನನ್ನು ಪರಮನೊಂದಿಗೆ ಹೊಂದಿಸುವುದು ಹೇಗೆ—ಅದನ್ನೆಲ್ಲ ಸ್ಪಷ್ಟಪಡಿಸಿದರು. ಅದನ್ನು ಸಾಧಿಸುವುದಕ್ಕೆ ಬೇಕಾದ ಶಕ್ತಿಯನ್ನೂ ಭಕ್ತಿಯನ್ನೂ ಉಪದೇಶ ಮಾಡಿದರು.

"ಹಾಗಾದಕ್ಕೆ ಶಿವು, ಈ ಬಾವಿ ಅಗೆಸುವುದು, ತೋಟ ಮಾಡಿಸುವುದು, ಕೆರೆ ಕಟ್ಟಿಸುವುದು ದೇವಸ್ಥಾನದ ಕಾರ್ಯ, ಇವೆಲ್ಲಾ ಏನೂ ಕೆಲಸಕ್ಕೆ ಬಾರದ್ದು ಎಂದು ಅರ್ಥವೆ?" ಎಂದರು, ಶಿವೂ ತಾಯಿ.

"ಹಾಗೆಂದು ಯಾರು ಹೇಳಿದರಮ್ಮ! ಪ್ರಭುದೇವರು ಹೇಳಿದ್ದು—ರಾಮಯ್ಯನಂಥವರಿಗೆ ಆ ಕೆಲಸ ಅಲ್ಲ ಎಂದು, ಅಷ್ಟೆ. ಈ ಕೆಲಸ ಕಡಮೆ ಎಂದು ಅಲ್ಲ; ಇದಕ್ಕಿಂತ ದೊಡ್ಡ ಕೆಲಸ ಆಗಬೇಕಾದ್ದು ಇದೆ, ಅದನ್ನ ಆಗಮಾಡಿಸೋ ಸಾಮರ್ಥ್ಯ

ಸಿದ್ಧರಾಮಯ್ಯನಲ್ಲಿ ಸುಪ್ತವಾಗಿ ಇದೆ, ಸಿದ್ಧರಾಮಯ್ಯ ಆ ಸಾಮರ್ಥ್ಯವನ್ನ ಜಾಗ್ರತ ಮಾಡದೇ ಇದ್ದಾನಲ್ಲಾ, ಎಂದೇ ಪ್ರಭು ತಾವಾಗಿ ಅವನ ಹತ್ತಿರ ಬಂದದ್ದು."

"ಓ! ಹಾಗೆನ್ನು! ಆಮೇಲೆ?"

"ಅಮೇಲೆ....ಪ್ರಭುದೇವರು ಗೋರಕ್ಷನ ಹತ್ತಿರ ಹೋದದ್ದು ಹೇಳಲಾ?"

"ಇದೇನೋ ಇದು, ಹೀಗೆ ಹಾರಿಸುತ್ತೀಯೆ! ಬಸವಣ್ಣನವರ ಮನೆಗೆ ಬರುವ ಮುಂಚೆ....ಯಾರು ಯಾರು ಎಂದೆ? ಗೊಗ್ಗಯ್ಯ...ಆಯ್ತು. ಮುಕ್ತಾಯಕ್ಕ....ಆಯ್ತು, ಸಿದ್ಧರಾಮಯ್ಯ...ಆಯ್ತು. ಈಗ ಈ ಗೋರಕ್ಷನ ಹತ್ತಿರ ಹೋದದ್ದು—ಬಸವಣ್ಣನವರ ಮನೆ ಬಿಟ್ಟಮೇಲಲ್ಲವೇ?....ಮತ್ತೆ, ನಿನ್ನ ಪ್ರಭು ಬಸವಣ್ಣನವರ ಮನೆಯಲ್ಲಿ ಇರುವಾಗ, ಅದು ಯಾರೋ ಮಹದೇವಿಯಕ್ಕನಿಗೆ ಉಪದೇಶ ಮಾಡಿದರು ಎಂದೆಯಲ್ಲೊ! ಅದು ಮರೆತೇ ಹೋಯಿತಾ?"

ಶಿವೂ ಸುಸ್ತಾದ. "ದೇವರೇ ಗತಿ! ಅಮ್ಮಾ ನಿನ್ನಂಥವರು ಒಬ್ಬರಿಬ್ಬರು ಕ್ಲಾಸಿನಲ್ಲಿ ಇದ್ದುಬಿಟ್ಟರೆ, ನಮ್ಮ ಮೇಷ್ಟರುಗಳ ಗತಿ ಬೇಡಾ ಬೇಡ! ಕಿವಿಕೊಟ್ಟು ಕೇಳುವವರು ಇಷ್ಟು ಗಮನವಿಟ್ಟು ಬಿಟ್ಟರೆ, ಹೇಳುವವರು ಬದುಕಿದಹಾಗಾಯಿತು!" ಎಂದ.

"ಮತ್ತೆ ನಿದ್ರೆ ಕೆಟ್ಟು ಕೇಳುವುದಕ್ಕೆ ಕುಳಿತದ್ದು—ವಿಷಯ ತಿಳಿದುಕೊಳ್ಳುವುದಕ್ಕೊ? ಸುಮ್ಮನೆ ಹೊತ್ತು ಕಳೆಯುವುದಕ್ಕೊ?"

"ಅದು ಸರಿ, ಎನ್ನು. ಆದರೆ, ಅಮ್ಮ ನಾನು ಮಹದೇವಿಯಕ್ಕನವರ ವಿಚಾರವನ್ನು ಬೇಕೆಂತಲೇ ಬಿಟ್ಟುಕೊಂಡಿದ್ದೆ—ಆಮೇಲೆ ಹೇಳೋಣ, ಎಂದು."

"ಗೊತ್ತು ಗೊತ್ತು, ಬಿಡೋ ಜೆಟ್ಟಿ ಬಿದ್ದದ್ದು ಅದೂ ಒಂದು ವರಿಸೆ, ಎಂದ ಹಾಗೆ."

"ಹಾಗೇ ಎಂದುಕೊ. ಅಮೇಲೆ ನಿನಗೇ ಗೊತ್ತಾಗುತ್ತೆ, ನಾನು ಹೇಳಿದ್ದು ನಿಜವೋ ಸುಳ್ಳೋ ಎಂದು."

“ಆಗಲಪ್ಪ. ಮುಂದಕ್ಕೆ ಹೇಳು. ಗೋರಕ್ಷನ ಕಥೆಯನ್ನೇ.”

ಬಸವಣ್ಣನವರ ಮನೆಯಿಂದ ಹೊರಟು, ಪ್ರಭು ಶ್ರೀಶೈಲಕ್ಕೆ ಬಂದರು.

ಶ್ರೀಶೈಲ ಸರ್ವಚಿಂತಾನಣಿಗಳಿಗೆ ಜನ್ಮಸ್ಥಾನ, ಸಮಸ್ತವಾದ ದಿವ್ಯೌಷಧಿಗಳಿಗೆ ತವರುಮನೆ, ಅನೇಕ ರೀತಿಯ ಅಮೃತದ ಬಿಲಗಳು ಇಲ್ಲಿವೆ, ಸಿದ್ಧರಸದ ಬಾವಿಗಳು ಇಲ್ಲಿವೆ, ಗುಪ್ತವಾದ ನಿಧಿ ನಿಕ್ಷೇಪಗಳು ಕಾಣಿಸುವ ಕಣ್ಣಿನ ಅಂಜನಗಳು ಇಲ್ಲಿವೆ—ಎಂದು ಅವುಗಳನ್ನು ಅರಸುತ್ತಾ ಅಲ್ಲಿ ಅನೇಕರು ಬಂದು, ಅವುಗಳನ್ನು ಪಡೆಯಲು ಸಾಧನೆ ಮಾಡುತ್ತಿದ್ದರು. ಆ ಶ್ರೀಪರ್ವತ ಎಂತಹ ಅದ್ಭುತವಾದುದೆಂದರೆ—ಅದರ ಶಿಖರದಲ್ಲಿ ನಡೆದಾಡುವ ಬಳ್ಳಿಗಳು, ನಗುವ ಗಿಡಗಳು, ಮಾತನಾಡುವ ಕಲ್ಲುಗಳು, ಕಾಂತಿಯಿಂದ ಉರಿಯುವ ವೃಕ್ಷಗಳು, ಬಣ್ಣಬಣ್ಣದ ಬೆಳಕಿನ ಪೊದೆಗಳು, ಕುಡಿದೊಡನೆ ಅಂತಃಕರಣ ಶುದ್ಧವಾಗುವ ಮಡುಗಳು, ಜಾತಿವೈರವನ್ನು ಬಿಟ್ಟ ಖಗ ಮೃಗ ಮೊದಲಾದುವು! ಏರಿಹೋದರೆ, ಮೇಲೆ ಸತ್ಯಲೋಕಕ್ಕೆ ಕರೆದೊಯ್ಯುವ ಗಿರಿಶಿಖರಗಳು! ಇಳಿದುಬಂದರೆ, ಕೆಳಗೆ ಸಪ್ತಪಾತಾಳಗಳ ಕೊನೆಯನ್ನು ತೋರಿಸುವ ಅಗಾಧವಾದ ಬಿಲಗಳು! ಎಲ್ಲೆಲ್ಲಿ ನೋಡಿದರೂ, ಸಾಧಕರು ಏನೇನು ಬೇಡಿದರೆ ಅದನ್ನು ಸಮೃದ್ಧಿಯಾಗಿ ಕೊಡುವ ಸುವಸ್ತುಗಳು! ಇಂತಹ ಶ್ರೀಶೈಲಕ್ಕೆ ಪ್ರಭುದೇವರು ಬಂದರು.

ಅಲ್ಲಿ ಒಬ್ಬ ಸಾಧಕ, **ಗೋರಕ್ಷ** ಎಂಬಾತ. “ದೇಹವನ್ನು ವಜ್ರದ ಹಾಗೆ ಗಟ್ಟಿಯಾಗಿ ಮಾಡಿಕೊಂಡುಬಿಟ್ಟರೆ, ಸಾವು ನನ್ನ ಹತ್ತಿರ ಸುಳಿಯುವುದಿಲ್ಲ” ಎಂದುಕೊಂಡು, ಆತ ಸಾಧನೆಮಾಡಿ ವಜ್ರಕಾಯವನ್ನು ಸಂಪಾದನೆ ಮಾಡಿಕೊಂಡಿದ್ದ. ಇಂಥವನ ಬಳಿಗೆ ಪ್ರಭು ಬಂದರು.

ತಾನು ದೊಡ್ಡ ಸಾಧಕನೆಂದು ಗೋರಕ್ಷನಿಗೆ ಹಮ್ಮು ಆದ್ದರಿಂದ ಆತ ಪ್ರಭುವಿಗೆ ನಮಸ್ಕಾರ ಮಾಡದೆ ಬಿಂಕದಿಂದ ಹಾಗೇ ಸೆಟೆದುನಿಂತೇ ಕೈಮುಗಿದು, ಶರಣೆಂದು

ಆದರೂ ಮರ್ಯಾದೆಯನ್ನು ಮರೆಯಲಿಲ್ಲ, ಆತ. ಪ್ರಭುವನ್ನು ಒಂದು ಎತ್ತರವಾದ ಪೀಠದಲ್ಲಿ ಕುಳ್ಳಿರಿಸಿ, ವಿಶ್ವಾಸದಿಂದ ಅವರ ಕುಶಲಪ್ರಶ್ನೆಯನ್ನು ವಿಚಾರಿಸಿದ: "ಎಲ್ಲಿಂದ ಬಿಜಯಮಾಡಿದಿರಿ? ನಿನು ಕಾರಣ ದಯೆ ಮಾಡಿದಿರಿ? ಅಪ್ಪಣೆಕೊಡಿಸಬೇಕು. ನೀವು ಬರುವುದು ನಮಗೆ ಬಹುದೊಡ್ಡ ಭಾಗ್ಯ ಬಂದ ಹಾಗಾಯಿತು!" ಎಂದು ಉಪಚಾರದ ಮಾತನಾಡಿದನು.

ಪ್ರಭು ಅದಕ್ಕೆ ಹೇಳಿದರು: "ಭಕ್ತಿಯನ್ನು ಕಡೆಯಬೇಕೆಂದು ಬಂದಿದ್ದೇವೆ, ಗೋರಕ್ಷ. ಈ ಕಡೆಯ ಮನುಷ್ಯರ ಮನಸ್ಸಿಗೆ ಕಡೆಯನ್ನು ಮಾಡುವುದಕ್ಕಾಗಿ ಬಂದಿದ್ದೇವೆ. ದೇಹದ ಮೇಲಿನ ಆಸೆಯಿಂದ ಕುದಿದು ಕೋಟಲೆಪಡುವವರ ಕಳವಳವನ್ನು ಕಳಚುವುದಕ್ಕಾಗಿ ನಾವು ನಡೆದು ಬಂದಿದ್ದೇವೆ, ಗೋರಕ್ಷ!"

ಗೋರಕ್ಷನಿಗೆ ವಿಸ್ಮಯವಾಯಿತು. "ಇದೇನಿದು! ಈತನ ಉತ್ತರದ ರೀತಿ ಹೊಸತಾಗಿದೆ. ನಾನು ಲೌಕಿಕಕ್ಕೆ ಸಂಬಂಧಪಟ್ಟ ಪ್ರಶ್ನೆ ಕೇಳಿದರೆ, ಈತನು ಪರಮಾರ್ಥವನ್ನು ಸೂಚಿಸಿ ಉತ್ತರ ಹೇಳುತ್ತಿದ್ದಾನೆ! ಅದೂ ಅಲ್ಲದೆ, ನನ್ನನ್ನು ವಿಚಾರಿಸದೆಯೇ ನನ್ನ ಹೆಸರನ್ನೂ ತಿಳಿದಿದ್ದಾನೆ! ನಿಜವಾಗಿಯೂ ಈತನೇ ನನ್ನ ಗುರುವಾದ ಆದಿನಾಥನಿರಬೇಕು ಖಂಡಿತ!" ಎಂದುಕೊಂಡು, "ಎಲೆ ಮಹಾ ಪುರುಷ! ನಿನ್ನ ಅಂತಸ್ಥವು ನಮ್ಮ ಬುದ್ಧಿಗೆ, ಎಷ್ಟು ನೋಡಿದರೂ, ನಿಲುಕದು. ನಿನ್ನ ರೀತಿ ಹೊಸದಾಗಿದೆ. ನಿನ್ನ ನೆಲೆಯನ್ನು ನೀನೇ ನಮಗೆ ತಿಳಿಸಬೇಕು." ಎಂದು ಪ್ರಭುವನ್ನು ಕೇಳಿಕೊಂಡನು.

ಅದಕ್ಕೆ ಪ್ರಭುವೆಂದರು: "ತನ್ನ ಒಳಗಿರುವುದನ್ನೇ ತಿಳಿಯದವನು ಇತರರ ಒಳಗಿರುವುದನ್ನು ಹೇಗೆ ತಿಳಿದಾನು, ಗೋರಕ್ಷ? ಕಣ್ಣು ಕಾಣದ ಕುರುಡ, ಕನ್ನಡಿ ಹಿಡಿದ ಮಾತ್ರದಿಂದ, ಏನು ಕಂಡಾನು? ನನ್ನೊಳಗಿನ ನಿರಾಳವೆಂಬುದು ನಿನಗೆ ಮಾತುಗಳಿಂದ ವರ್ಣಿಸಲಾಗದ್ದು, ಗೋರಕ್ಷ."

ಗೋರಕ್ಷನಿಗೆ ಸ್ವಲ್ಪ ಹಂಗಿಸಿದ ಹಾಗಾಯಿತು. "ನನ್ನ ಅಂತಸ್ಥವನ್ನು ನಾನು ಬಲ್ಲೆ, ನಮ್ಮ ಸಂಪ್ರದಾಯದ ಪ್ರಕಾರ, ಈ ದೇಹವು ನಷ್ಟವಾಗದಂತೆ ಇದನ್ನು ವಜ್ರ ಮಾಡಿಕೊಂಡು, ನಾನೂ ಮುಕ್ತಿಯನ್ನು ಪಡೆದಿದ್ದೇನೆ" ಎಂದನು.

"ಸಂಪ್ರದಾಯದ ಮಾರ್ಗ ಅಷ್ಟು ಸುಲಭವಲ್ಲ, ಗೋರಕ್ಷ. ಎಂದಿದ್ದರೂ ಕೆಡುವ ಈ ದೇಹವನ್ನು ಶಾಶ್ವತವೆಂದು ನಂಬುವುದು ಮೂರ್ಖತನ."

"ಹೌದು, ಹೌದು. ತಿಳಿಯದವರ ಕೈಯಲ್ಲಿ ಈ ದೇಹ ಎಂದಿದ್ದರೂ ಕೆಡುವ ಒಡವೆಯೇ. ಆದರೆ, ತಿಳಿದವರ ಕೈಯಲ್ಲಿ ಇದೇ ತಾನೇ ರತ್ನವಾಗಬಲ್ಲುದು."

ಪ್ರಭು ಎಷ್ಟೋ ಪರಿಯಿಂದ ಅವನ ತಪ್ಪುಭಾವನೆಯನ್ನು ತಿಳಿಸಲು ನೋಡಿದರು. ಗೋರಕ್ಷನಿಗೆ ಅದು ಮನಸ್ಸಿಗೆ ಹಿಡಿಯಲಿಲ್ಲ. ಕಡೆಗೆ ಹೇಳಿದ: "ಹಾಗಾದರೆ, ಏಳು. ಈ ಆಯುಧ ಹಿಡಿದುಕೋ. ನಿನ್ನ ಕೈಲಾದಷ್ಟು ಜೋರಿನಿಂದ ನನ್ನ ಈ ದೇಹಕ್ಕೆ ಹೊಡೆ. ಇದರಲ್ಲಿ ಒಂದು ಕೂದಲು ಹರಿದರೆ, ಮುರಿದರೆ, ನಾನು ಸಿದ್ಧನೇ ಅಲ್ಲ!" ಎಂದು ಒಂದು ಖಡ್ಗವನ್ನು ನೀಡಿದನು.

"ಆಗಲಿ. ಒಲ್ಲೆ ಎನಲೇಕೆ? ಇವನ ಅರ್ತಿಯನ್ನು ಆದರಿಸೋಣ. ಒಂದು ವೇಳೆ ಏಟಿಗೆ ಸಿಕ್ಕಿ ಸತ್ತನಾದರೂ ನಾವು ಇವನನ್ನು ಮತ್ತೆ ಸೃಷ್ಟಿಸಬಹುದಲ್ಲಾ!" ಎಂದುಕೊಳ್ಳುತ್ತಾ, ಪ್ರಭು, ಏನೂ ಹಿಂದೆಗೆಯದೆ ಬಲವಾಗಿ ಝಳಪಿಸಿ ಹೊಡೆದರು. ಹೊಡೆದರೆ—ಖಣಿ ಖಟಿಲು ಶಬ್ದವಾಯಿತು! ನೆಲ ನಡುಗಿತು! ಬೆಟ್ಟದಿಂದ ಬಂಡೆಗಳು ಉದುರಿದುವು! ಆದರೂ ಗೋರಕ್ಷನ ಒಂದು ಕೂದಲೂ ಕೊಂಕಲಿಲ್ಲ! "ಎಂಥ ಬರಸಿಡಿಲೇ ಬರಲಿ, ಎಂಥ ಶೀತೋಷ್ಣಗಳೇ ಆಗಲಿ, ಯಾವ ಖಡ್ಗದ ಏಟೇ ಬೀಳಲಿ, ಕೆಡದೆ ನಿಲ್ಲುವ ವಜ್ರದ ಬಿರುಸಿನ ಈ ಶರೀರವು ಸಿದ್ಧಿಯಲ್ಲದಿದ್ದರೆ, ಬೇರೆ ಯಾವುದು ಸಿದ್ಧಿ? ನಿನಗೆ ಗೊತ್ತಿದ್ದರೆ ಹೇಳು?" ಎಂದು ಆಡಿದನು.

ಪ್ರಭು ಹೇಳಿದರು: “ಹಾಗಾದರೆ, ಈ ಕತ್ತಿಯನ್ನು ನೀನೂ ಹಿಡಿದುಕೊ. ನನ್ನನ್ನೂ ಹೊಡೆದುನೋಡು, ನಿನ್ನ ಮುಷ್ಟಿಗೂ ಭುಜಕ್ಕೂ ಇರುವ ಬಲವನ್ನೆಲ್ಲ ಪ್ರಯೋಗಿಸಿ ಹೊಡೆ. ಹೊಡೆದು ನೋಡು, ಮಾತನಾಡಿ ಏನು ಪ್ರಯೋಜನ!”

ಆಗಗೋರಕ್ಷನು “ಈತನ ಸಿದ್ಧಿತನದ ಠೀವಿಯನ್ನೂ ನೋಡಿಯೇ ಬಿಡೋಣ!” ಎಂದುಕೊಂಡು ಪ್ರಭುವಿನ ಮೈಯ ಮೇಲೆ ಎಡಗಡೆಯಿಂದಲೂ ಬಲಗಡೆಯಿಂದಲೂ ಕತ್ತಿಯನ್ನು ಬೀಸಿದನು. ಬೀಸಿದರೆ ಕತ್ತಿ ಬಯಲನ್ನು ತಾಗಿದಂತೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಹಾಯ್ದಿತು. ಸಪ್ಪುಳಾಗಲಿಲ್ಲ, ಆಯುಧ ತಡೆಯಲಿಲ್ಲ, ಅದು ಮೊಂಡಾಗಲಿಲ್ಲ, ದೇಹದ ನಿಲವು ತಪ್ಪಲಿಲ್ಲ. ಆ ಹರಿತವಾದ ಕತ್ತಿ ಹಾರುವ ಹದ್ದಿನ ಹಾಗೆ, ಪ್ರಭುವಿನ ಬಯಲು ದೇಹದಲ್ಲಿ ಈಸಾಡಿತು!

“ಇದು ಚೋದ್ಯ!” ಎಂದ ಗೋರಕ್ಷ. ತನ್ನನ್ನು ಹೊಡೆದರೆ, ಕತ್ತಿ ಖಣಿಲೆಂದಿತು; ತಾನು ಆತನನ್ನು ಹೊಡೆದರೆ ಬಯಲನ್ನು ಹೊಯ್ದಂತೆ ನುಣುಚಿ ನುಣ್ಣನೆ ಜಾರಿಹೋಯಿತು! “ಇದು ಯಾವ ಮಹಿಮೆಯ ಗುಣವೊ?” ಎಂದು ವಿನಯದಿಂದ ಕೇಳಿಕೊಂಡ.

ಪ್ರಭು ಎಂದರು: “ಗೋರಕ್ಷ! ದೇಹ ಬಲಿತರೆ, ಮಾಯೆ ಬಲಿಯುತ್ತದೆ. ಮಾಯೆ ಬಲಿತಕ್ಕೆ ಆಸೆ ಬಲಿಯುತ್ತದೆ. ದೇಹ, ಮಾಯೆ, ಆಸೆ—ಈ ಮೂರನ್ನು ಬಲಿಯಿಸಿದವನು ಸಿದ್ಧನಲ್ಲ, ಈ ಮೂರರ ಹಂಗನ್ನೂ ಮೀರಿದವನು—ಅವನೇ ಸಿದ್ಧರಲ್ಲಿ ಸಿದ್ಧ! ಕೇಳು, ಗೋರಕ್ಷ!”

ಗೋರಕ್ಷನ ಅಜ್ಞಾನ ಚೆದರಿಹೋಯಿತು. “ಇದುವರೆಗೆ ನಿನ್ನ ಮಹಿಮೆಯನ್ನು ತಿಳಿಯದೆ, ನನ್ನ ಮದದಿಂದ, ಸರ್ವ ತಪ್ಪುಗಳನ್ನೂ ಮಾಡಿದೆ. ಕ್ಷಮಿಸಿ ಕಾಪಾಡಬೇಕು ಎಂದು ಪ್ರಭುವಿನ ಪಾದಗಳಲ್ಲಿ ಉದ್ದಂಡ ನಮಸ್ಕಾರಮಾಡಿ, ಗೋರಕ್ಷನು ಭಯ ಭಕ್ತಿಯ ಭಾರದಿಂದ ಬಾಗಿದನು.

ಆಗ ಪ್ರಭು—ಬಿಸಿಯ ಹದವನ್ನು ತಿಳಿದು, ಲೋಹವನ್ನು ಬೆಸೆಯುವುದಿಲ್ಲವೇ, ಹಾಗೆ—ಗೋರಕ್ಷನ ಮನಸ್ಸು ಪರಿಪಕ್ವವಾಗಿ ಹಸನಾದುದನ್ನು ತಿಳಿದು, 'ಇನ್ನು ಅವನಿಗೆ ಉಪದೇಶಕೊಡುವೆನು' ಎಂದು ಆತನನ್ನು ಕರುಣೆಯಿಂದ ಮನ್ನಿಸಿದರು. ಅನಂತರ ಆತನಿಂದ ಗುರುಪೂಜೆಯನ್ನು ಕೈಕೊಂಡು, 'ಇನ್ನು ಯಾರು ಯಾರು ಅಜ್ಞಾನಿಗಳು ಇರುವರೋ ಅವರನ್ನು ಸುಜ್ಞಾನಿಗಳನ್ನಾಗಿ ಮಾಡುತ್ತೇನೆ' ಎಂದು ಮುಂದೆ ಹೊರಟರು.

ಉತ್ತರದ ದೇಶಗಳಲ್ಲಿ ಪ್ರಭು ಅನೇಕ ಆಶ್ರಮಗಳನ್ನು ಕಂಡರು. ಅಲ್ಲಿ, ಕಳಿತ ಹಣ್ಣುಗಳಿಂದ ತುಂಬಿದ ಮರಬಳ್ಳಿಗಳು, ತಿಳಿಯ ನೀರಿನ ಕೊಳಗಳು ಸುಮಧುರವಾಗಿ ಹಾಡುವ ಹಕ್ಕಿಗುಂಪುಗಳು—ಇವುಗಳಿಂದ ತುಂಬಿದ ಮಹಾ ಅರಣ್ಯವನ್ನು ಕಂಡರು. ಅಲ್ಲಿ ಕೆಲವರು ವೇದವನ್ನು ಓದುವರು, ಕೆಲವರು ಶಾಸ್ತ್ರವನ್ನು ಕೇಳುವರು, ಕೆಲವರು ವೇದಾರ್ಥವನ್ನು ಉಪನ್ಯಾಸಮಾಡುವರು. ಕೆಲವರು ದರ್ಶನ ತರ್ಕಗಳ ಭೇದವನ್ನು ಚರ್ಚೆಮಾಡುವರು. ಕಾಡೆಲ್ಲ ಶಬ್ದ ಸಂಭ್ರಮದಿಂದ ತುಂಬಿ ತುಳುಕುತ್ತಿತ್ತು.

ಪ್ರಭುದೇವರು ಅಲ್ಲಿನ ಮುನಿಗಳನ್ನು ನೋಡಿದರು. “ಉಡುವುದಕ್ಕೆ ನಾರು, ಹಸಿವಾದರೆ ಹಣ್ಣು, ಬಳಿಯಲು ವಿಭೂತಿ, ಹಾಸಲು ಕೃಷ್ಣಾಜಿನ, ವಾಸಕ್ಕೆ ಅಡವಿ—ಹೀಗೆ, ಮುನಿಗಳಿಗೆ ಇನ್ನೂ ಈ ಸಂಸಾರ ಬಿಡದಲ್ಲಾ!” ಎಂದುಕೊಂಡರು. “ನಾರುಬಟ್ಟೆಗಾಗಿ ಮರವನ್ನು ನಿರೀಕ್ಷಿಸಿಕೊಂಡು, ಆಹಾರಕ್ಕಾಗಿ ಕಂದಮೂಲಗಳಿಗೆ ಕೈಯೊಡ್ಡಿ ನೀರಡಿಕೆಗಾಗಿ ನಾನಾ ನದಿ ಸರೋವರಗಳನ್ನು ಎದುರು ನೋಡುತ್ತಿರುವ ಈ ಸಂಸಾರ ಇನ್ನೂ ಇವರನ್ನು ಬಿಡದಲ್ಲಾ! ಇವರ ಗತಿಯೇ ಹೀಗಾದರೆ, ಉಳಿದವರ ಗತಿಯೇನು?” ಎಂದುಕೊಂಡರು.

ಅನಂತರ ಅವರ ಯಜ್ಞಯಾಗಾದಿಗಳನ್ನು ನೋಡಿ, ನಿಜವಾದ ಯಾಗ ಯಾವುದೆಂದು ಅವರಿಗೆ ಬೋಧಿಸಿದರು: "ಅಹಂಕಾರ ಎಂಬುದೇ ನಾವು ಯಾಗಮಾಡಬೇಕಾದ ಪಶು. ಮನಸ್ಸೇ ಆ ಪಶುವನ್ನು ಕಟ್ಟುವ ಕಂಬ. ಉಸಿರು ಎಂಬುದೇ ಆ ಪಶುವನ್ನು ಆ ಕಂಬಕ್ಕೆ ಕಟ್ಟುವ ಹಗ್ಗ. ವಿವೇಕವೇ ಆ ಪಶುವನ್ನು ಕತ್ತರಿಸುವ ಶಸ್ತ್ರ, ಸುಜ್ಞಾನವೇ ಅದನ್ನು ಸುಡುವ ಬೆಂಕಿ. ಸದಾ ಪವಿತ್ರನಾದ ಆತ್ಮನೇ ಈ ಯಜ್ಞಮಾಡತಕ್ಕವನು. ಇಂಥ ಯಜ್ಞದಲ್ಲಿ, ಸುಳ್ಳಾದ್ದನ್ನೆಲ್ಲ ಆಹುತಿ ಕೊಟ್ಟು, ಉಳಿಯುವ ಸತ್ಯದ ಪ್ರಸಾದದಿಂದ ದೊರಕುವ ತೃಪ್ತಿಯೇ ಪರಮಾನಂದವೆಂಬುದು. ಸತ್ಯವೂ ಶಾಶ್ವತವೂ ಆದ ಆ ಪರತತ್ತ್ವವೇ ತಾನು ಎಂಬುದನ್ನು ತಿಳಿಯುವುದೇ ಈ ಯಾಗದ ಫಲ" ಎಂಬುದಾಗಿ ಅವರು ಮಾಡುತ್ತಿದ್ದ ಯಾಗಗಳಿಗೆ ಬದಲಾಗಿ ಆತ್ಮಯಾಗವನ್ನು ಬೋಧಿಸಿದರು. ಅವರೂ ಅದರಂತೆ ನಡೆಯು ಉತ್ತಮ ಮಾರ್ಗದಲ್ಲಿ ಮುಂದುವರಿದರು.

## ಮಾಯಾಕೋಲಾಹಲ

ದೀಪ ಇದ್ದಕ್ಕಿದ್ದಂತೆ ಆರಿಹೋಯಿತು. “ದೀಪ ಆರಿಹೋಯಿತಲ್ಲಾ!” ಎಂದರು, ಶಿವೂತಾಯಿ.

“ಹೇಗೂ, ನಾನೇ ಆರಿಸಬೇಕೆಂದಿದ್ದೆ. ಅದು ತೊಂದರೆಯಿಲ್ಲದೆ ತಾನಾಗಿಯೇ ಆರಿಕೊಂಡಿತು. ನನ್ನ ಮುಂದಿನ ಕತೆಗೆ ಒಳ್ಳೇ ಹೊಂದಿಕೊಂಡ ಹಾಗೆ ಬಂತು, ಈ ಕತ್ತಲೆ.” ಎಂದ, ಶಿವು.

“ಅದೇನು ಹೊಂದಿಕೆ, ಅಪ್ಪ, ಹಾಗೆಂದರೆ?”

“ಅದೇ? ಮಹದೇವಿಯಕ್ಕನವರ ಕಥೆ ಹೇಳಬೇಕಾಗಿತ್ತಲ್ಲಾ—ಅದನ್ನು ಹೇಳಬೇಕಾದರೆ ಪಾರ್ವತೀದೇವಿಯ ತಾಮಸಕಳೆಯ ಪೂರ್ವಕಥೆಯಿಂದ ಪ್ರಾರಂಭಿಸಬೇಕು. ಆ ತಾಮಸಕ್ಕೆ, ಈ ಕತ್ತಲೆಗೆ ಚೆನ್ನಾಗಿ ಹೊಂದಿಕೆಯಾಯಿತು, ಎಂದೆ.”

“ಬೀದಿಬಾಗಿಲು, ಹಿತ್ತಿಲಬಾಗಿಲು ತಾಪಾಳು ಹಾಕಿದೆಯೇನೊ? ತಾಳು, ಒಂದು ಸಲ ನೋಡಿಬಿಡುತ್ತೇನೆ” ಎಂದು ಶಿವೂತಾಯಿ, ಎದ್ದರು.

“ಹಾಕದೇ ಇದ್ದರೂ, ದೇವರಿದ್ದಾನೆ, ಬಿಡಮ್ಮಾ” ಎಂದ ಶಿವು, ಬಿದ್ದುಕೊಂಡಿದ್ದ ಹಾಗೇ, ನಗುತ್ತಾ.

“ನಮ್ಮ ಕೆಲಸ ನಾವು ಮಾಡಿದ ಮೇಲೆ, ದೇವರನ್ನು ನೋಡಿಕೊಳ್ಳುವುದಕ್ಕೆ ಬಿಡುವುದು!” ಎನ್ನುತ್ತಾ ಶಿವೂತಾಯಿ ಬಾಗಿಲು ಭದ್ರಪಡಿಸಿದ್ದನ್ನು ಕತ್ತಲಲ್ಲಿ ಹಾಗೇ ಕೈಯಿಂದ ನೋಡಿಕೊಂಡು ಬಂದು, ಮಲಗಿದರು. ಮಲಗಿದ ಮೇಲೆ, “ಅಯ್ಯೋ! ಎದ್ದ ಕೈಲೇ ಸ್ವಿಚ್ ಹಾಕಿಬಿಡಬೇಕಾಗಿತ್ತು” ಎಂದರು.

"ಇರಲಿ, ಬಿಡಮ್ಮ ಪಾರ್ವತಿಯ ಸಾತ್ತ್ವಿಕ ಕಳೆಯ ಪ್ರಸ್ತಾಪ ಬರುವ ಹೊತ್ತಿಗೆ, ಹೋದ ಬೆಳಕು ಅದೂ ತಾನಾಗಿಯೇ ಬರುತ್ತದೋ ಏನೋ, ನೋಡೋಣ."

"ಇದೇನಿದು—ತಾಮಸಕಳೆ, ಸಾತ್ತ್ವಿಕಕಳೆ? ಪಾರ್ವತೀದೇವಿ ಎಲ್ಲಿಂದ ಬಂದಳೋ, ಈ ನಿನ್ನ ಮಹದೇವಿಯಕ್ಕನ ಕಥೆಗೆ?"

"ಈ ಮಹದೇವಿಯಕ್ಕ, ಬಸವಣ್ಣನವರು, ಸಿದ್ಧರಾಮಯ್ಯ ಇವರೆಲ್ಲ ಅವತಾರಪುರುಷರು, ಅಮ್ಮ ಎಂದರೆ, ಈ ಭೂಮಿಯಲ್ಲಿ ಯಾವುದೋ ಅಗತ್ಯವಾಗಿ ಆಗಬೇಕಾಗಿದ್ದ ಕಾರ್ಯವನ್ನು ಮಾಡಿ ಹೋಗುವುದಕ್ಕೋಸ್ಕರ ಕೈಲಾಸದಿಂದ ಇಲ್ಲಿಗೆ ಬಂದುಹೋದವರು."

"ಓ, ಪುರಾಣ ಎಂದು ಹೇಳು!"

"ಆ! ಪುರಾಣ. ನಮ್ಮದೇಶದಲ್ಲಿ, ಏನಮ್ಮ: ಅಂಕಿಗೆ, ಇಸವಿಗೆ ಲೆಕ್ಕಕ್ಕೆ ಏನಾದರೂ ಸಿಕ್ಕಿದರೆ, ಅದು 'ಚರಿತ್ರೆ'; ಇಸವಿಗೆ ಸಿಕ್ಕದೆ, ಈ ಲೋಕದ ಕತೆ ಆದರೆ, ಅದು 'ಇತಿಹಾಸ'; ಅದೇ ಏನಾದರೂ ಪರಲೋಕದ ಕತೆ ಆಗಿಬಿಟ್ಟರೆ, ಅದು 'ಪುರಾಣ.' ನಮ್ಮ ದೇಶದಲ್ಲಿ ಅಂತೂ, ಈ ಚರಿತ್ರೆ, ಇತಿಹಾಸ, ಪುರಾಣ ಇವು ಮೂರೂ ಒಂದನ್ನು ಒಂದು ಬಿಡದೆ ಹೊಂದಿಕೊಂಡೇ ಇವೆ. ಆದ್ದರಿಂದ, ಈಗ ಎಂಟುನೂರು ವರ್ಷದ ಹಿಂದಿನ ಮಹಾಪುರುಷರ ನಿಜವಾದ ಚರಿತ್ರೆ ಎಂದು ನೋಡುವುದಕ್ಕೆ ಹೊರಟರೂ, ಅದರ ಜೊತೆಗೆ ಸ್ವಲ್ಪ ಸ್ವಲ್ಪ ಈ ಹಳೆಯ ಪುರಾಣವೂ ಸೇರಿಕೊಂಡಿರುತ್ತೆ. ಇದನ್ನು ಸ್ವಲ್ಪ ಸಹಿಸಿಕೊಬೇಕು."

"ಏನೆಂದೆ? ಸಹಸಿಕೊಬೇಕಂತೆ! ಎಳೇನಿಂಬೇಕಾಯಿ! ಸವಿಯಬೇಕು ಎನ್ನು! ನಮಗೇನೋ, ಅಪ್ಪ, ಹಳೇ ಕಾಲದವರಿಗೆ, ನಿನ್ನ ಒಂದು ಚರಿತ್ರೆ ಕೇಳೋ ಕಡೆ ಒಂದುನೂರು ಪುರಾಣ ಕೇಳಿಯೇವು. ನನಗಂತೂ ನಂಬಿಕೆ, ಧೈರ್ಯ, ಭಕ್ತಿ ಎಲ್ಲಾನಮ್ಮ

ತಾಯಿ, ನಮ್ಮ ಅಜ್ಜಿ ನನಗೆ ಹೇಳುತಾ ಇದ್ದ ಪುರಾಣದ ಕಥೆಗಳಲ್ಲೇ!....ಉಂ! ಸಾಕು ಹರಟೆ. ಹೇಳು, ಮುಂದಿನ ಕಥೆ."

ಈಗ, ಕಥೆ ಕೈಲಾಸದಲ್ಲಿ ಅಮ್ಮ ಅಲ್ಲಿ ಈಶ್ವರ, ಪಾರ್ವತಿ ಒಟ್ಟಿಗೇ ಕುಳಿತಿರುವರಂತೆ. ಆ ಜೋಡಿಯನ್ನು 'ಶಿವಪಾರ್ವತಿ ದ್ವಂದ್ವ' ಎಂದು ಕರೆಯುತ್ತಾರೆ. ಅವರು 'ಜೋಡಿ' ಆದರೂ 'ಇಬ್ಬರು' ಎನ್ನುವ ಹಾಗೆ ಇರುವುದಿಲ್ಲವಂತೆ. ಅದು ಅಲ್ಲಿನ ಸ್ವಾರಸ್ಯ! ಚಂದ್ರನಲ್ಲಿ ತಂಪು ಸೇರಿರುವ ಹಾಗೆ, ಕರ್ಪೂರದಲ್ಲಿ ಕಂಪು ಕೂಡಿರುವ ಹಾಗೆ, ಕನಕದಲ್ಲಿ ಕಾಂತಿ ಹೊಂದಿರುವ ಹಾಗೆ ಶಂಕರನೂ ಶಕ್ತಿಯೂ ಅನ್ಯೋನ್ಯವಾಗಿ ಇರುವರಂತೆ. ಅಲ್ಲಿ ಮೃಡನನ್ನು ನೋಡಿದರೆ, 'ಈತನೇ ಮೂಲಾತ್ಮವೆಂಬ ಮಹಾವೃಕ್ಷ' ಎನಿಸುವುದಂತೆ. ಆತನ ಜಡೆಗಳೇ ಬೇರುಗಳು, ಗಂಗೆಯ ಮಡುವೇ ಪಾತಿಯ ನೀರು, ದೇಹವೇ ಮರದ ಮೈ, ನಾಗಾಭರಣಗಳೇ ಎಲೆ ಗರಿ, ಅಭಯ ವರದ ಹಸ್ತಗಳೇ ಹೂ ಹಣ್ಣು! ಆತನನ್ನು ಬಿಡದೆ ತಬ್ಬಿಕೊಂಡಿರುವ ಮೃಡಾಣಿ ತಾನೇ ಆ ಮೂಲಾತ್ಮವೃಕ್ಷಕ್ಕೆ ಹಬ್ಬಿ ಹೆಣೆದುಕೊಂಡ ಬಳ್ಳಿಯ ಹಾಗೆ ಇರುವಳಂತೆ!

ಒಂದು ದಿನ ಶಿವನ ಸಭೆಯಲ್ಲಿ, ಪಾರ್ವತೀದೇವಿ ಒಂದು ಪ್ರಶ್ನೆ ಕೇಳಿದಳು: "ಶಿವನೇ! ನಿನ್ನ ಒಡ್ಡೋಲಗದಲ್ಲಿ ಒಪ್ಪುವ ಈ ಘನ ಮಹಿಮರೆಲ್ಲರೂ ಇಲ್ಲಿಯೇ ಶಾಶ್ವತವಾದ ಸುಖದಿಂದ ಸದಾ ಇರುತ್ತಾರೆಯೊ? ಅಥವಾ, ಇವರು ಕೂಡ, ಯಾವಾಗಲಾದರೂ ಹೋಗಿ ಪುನಃ ಭೂಮಿಯಲ್ಲಿ ಹುಟ್ಟಿ ಬರಬೇಕಾಗುತ್ತದೆಯೊ?"

"ಬಹಳ ಒಳ್ಳೆಯ ಪ್ರಶ್ನೆಯನ್ನು ಕೇಳಿದೆ, ಪರಮೇಶ್ವರಿ" ಎಂದು ಪರಮೇಶ್ವರನು ಆಕೆಗೆ ತಿಳಿಯುವಂತೆ ಹೀಗೆ ಹೇಳಿದನು: "ಬ್ರಹ್ಮನೇ ಆಗಲಿ, ವಿಷ್ಣುವೇ ಆಗಲಿ, ಯಾರೇ ಆಗಲಿ—ಅವರಿಗೊಂದು ಹೆಸರು ಇದ್ದು ಅವರಿಗೊಂದು ರೂಪು ಇದ್ದು ಅವರು ಕರ್ಮಗಳನ್ನು ಮಾಡಿದರೆ, ಅವರಿಗೆ ನಿತ್ಯಸುಖವೆಂಬುದು ದೊರಕದು."

“ಹಾಗಾದರೆ, ಈ ನಾಮ ರೂಪು ಕ್ರಿಯೆ ಎಂಬ ಈ ಮೂರನ್ನು ಗೆಲ್ಲಬೇಕಾದರೆ ಏನು ಮಾಡಬೇಕು?” ಎಂದಳು, ಪಾರ್ವತಿ.

“ಅದನ್ನು ತಿಳಿಯಬೇಕಾದರೆ, ಆ ತಿಳಿವಳಿಕೆ ಇಲ್ಲಿ ಈ ಕೈಲಾಸದಲ್ಲಿ ಆಗದು. ಇದು ಭೋಗಭೂಮಿ; ಎಂದರೆ, ಭೂಮಿಯಲ್ಲಿ ಮಾಡಿದ ಸತ್ಕರ್ಮಗಳ ಫಲವನ್ನು ಅನುಭವಿಸುವ ಸ್ಥಳ ಮಾತ್ರ. ಆ ತಿಳಿವಳಿಕೆ ಬೇಕಾದರೆ, ಕರ್ಮಭೂಮಿಯಾದ ಭೂಲೋಕಕ್ಕೆ ಹೋಗಬೇಕು. ಅಲ್ಲಿ ಕರ್ಮಶರೀರವನ್ನು ಪಡೆದು, ಮಾನವರಾಗಿ, ನಿಜವನ್ನು ಸಾಧಿಸಿ ತಿಳಿಯಬೇಕು.” ಎಂದು ಶಿವನೆಂದನು.

“ನಿನ್ನ ಮಾತು ಅರ್ಥವಾಯಿತು, ಶಿವನೆ. ಆದರೆ, ಭೂಮಿಯಲ್ಲಿ ಹುಟ್ಟಿದವರಿಗೆ ಈ ಅನುಭವದ ಸ್ಥಿತಿಗತಿಗಳನ್ನು ಉಪದೇಶಿಸಲು ಸಮರ್ಥನಾದ ಗುರು ಯಾರು?” ಎಂದು ಪಾರ್ವತಿ ಪ್ರಶ್ನಿಸಿದಾಗ, ಪರಶಿವನು ಆಕೆಗೆ ಅಲ್ಲಮಪ್ರಭುವಿನ ಹೆಸರನ್ನು ಸಂಕ್ಷೇಪವಾಗಿ ತಿಳಿಸಿದನು. “ಹಿಂದೆ ಸುಜ್ಞಾನಿ ಮತ್ತು ನಿರಹಂಕಾರ ಎಂಬವರು ಮಕ್ಕಳನ್ನು ಬೇಡಿ ತಪಸ್ಸುಮಾಡಿದರು. ಆಗ ನನ್ನ ನಿಜಸ್ವರೂಪವೇ ಅವರ ಮಗನಾಗಿ ಜನಿಸಿತು. ಆ ಮಗನೇ ಅಲ್ಲಮನು. ಆತನಿಂದ ಈ ಜ್ಞಾನವನ್ನು ತಿಳಿಯಬಹುದು.”

ಅಲ್ಲಮನು ಈಶ್ವರನ ನಿಜಸ್ವರೂಪವಲ್ಲದೆ ಬೇರೆಯಲ್ಲ ಎಂದ ಮೇಲೆ, ಈಶ್ವರನೊಂದಿಗೆ ಅಗಲದೆ ಇರುವ ತಾನು ಆತನನ್ನು ಅರಿಯುವುದು ಏನೂ ಕಷ್ಟವಲ್ಲ ಎಂದು ಪಾರ್ವತಿ ಮರುಳಾದಳು.

“ಅಲ್ಲಮನಿಂದ ಈ ತತ್ತ್ವಜ್ಞಾನವನ್ನು ಪಡೆಯುವುದು ತುಂಬ ಸುಲಭ!” ಎಂದು ಹಗುರವಾಗಿ ಹೇಳಿದಳು.

ಈಶ್ವರ ಆಗಲೇ ಆಕೆಗೆ ಎಚ್ಚರಿಕೆ ಕೊಟ್ಟ: “ಹೇಳಿದರೆ, ಕೋಪವಾಗಬೇಡ, ಪಾರ್ವತಿ. ಇದ್ದುದನ್ನು ಇದ್ದ ಹಾಗೆ ಹೇಳುತ್ತೇನೆ. ಆತನು ಬರಿಯ ಮಾತುಗಳಿಗೆ ಸಿಕ್ಕುವನಲ್ಲ, ಯಾರು ಯಾರು ಯಾವ ಯಾವ ರೀತಿಯ ಭಕ್ತಿಗಳನ್ನು ಬೆಳಸುವರೋ

ಅವರಿಗೆ ಅದು ಅದೇ ಪ್ರೀತಿಯ ರೂಪಾಗಿ ಕಾಣಿಸಿಕೊಳ್ಳುವನು. ಆತನು ಸಾಮಾನ್ಯನಲ್ಲ, ಅಗಜೆ!" ಎಂದನು.

ಆದರೂ ಪಾರ್ವತಿಯ ಮದ ಮಟ್ಟಾಗಲಿಲ್ಲ: "ನೀನು ಹೇಳಿದ್ದು ಯಥಾರ್ಥವೇ ಆದರೂ, ಮಿಕ್ಕವರಿಗೆ ಆ ಅಲ್ಲಮನು ಮೀರಿದವನಾಗಿರಬಹುದು. ಆದರೆ, ನನ್ನ ಮನೋಹರವಾದ ಚಾತುರ್ಯಕ್ಕೆ ಆತನು ತನ್ನ ರಹಸ್ಯಗಳನ್ನೆಲ್ಲ ತಿಳಿಸಿಯೇ ತೀರಬೇಕಾದೀತು." ಎಂದಳು.

ಈಶ್ವರ ಎಷ್ಟಷ್ಟೋ ಹೇಳಿದ: "ಬೇಡ, ರಾಣಿ. ಈ ರೀತಿಯಾಗಿ ಪ್ರತಿಜ್ಞೆ ಮಾಡಿ ಹೋದರೆ, ಖಂಡಿತ ನಿನಗೆ ಸೋಲು."

"ಹಾಗೋ? ಹಾಗೇ ಆಗಲಿ. ಇದೋ, ಅಲ್ಲಮನ ಅಂತಸ್ಥವನ್ನು ನಾನು ತಿಳಿದೇ ತೀರುತ್ತೇನೆ, ನೋಡು" ಎಂದು ಪಾರ್ವತಿ, ಹಮ್ಮಿನಿಂದ ಆಗಲೇ ಅಲ್ಲೇ ಶಿವನ ಮುಂದೆ ಪ್ರತಿಜ್ಞೆಮಾಡಿದಳು. ತನ್ನ ತಾಮಸಕಳೆಯ ಮೂರ್ತಿಯಾದ ಮಾಯೆಯನ್ನು ಕರೆದು, "ಹೋಗು. ಭೂಮಿಯಲ್ಲಿ ಹುಟ್ಟು. ಅಲ್ಲಿ ಅಲ್ಲಮನನ್ನು ಅರಿತು ಬಾ" ಎಂದು ಆಜ್ಞಾಪಿಸಿದಳು. "ನೋಡು! ಅಲ್ಲಮನ ನಿಜವನ್ನು ತಿಳಿದುಬರುತ್ತೇನೆ. ಅಥವಾ, ಅದು ಆಗದಿದ್ದರೆ, ಅವನನ್ನೇ ಹಿಡಿದು ಎಳೆದುಕೊಂಡು ತರುತ್ತೇನೆ. ಇದು ನನ್ನ ಪ್ರತಿಜ್ಞೆ." ಎಂದು ಆ ಮಾಯೆ, ತನ್ನ ಹಮ್ಮಿನ ಅತಿರೇಕದಲ್ಲಿ ತನ್ನ ಶಕ್ತಿಯ ಮಿತಿಯನ್ನು ತಿಳಿಯದೆ, ಕೈಲಾಸದಿಂದ ಹೊರಟು ಭೂಮಿಗೆ ಬಂದಳು.

ಭೂಮಿಯಲ್ಲಿ ಮೇರುಪರ್ವತಕ್ಕೆ ದಕ್ಷಿಣದಲ್ಲಿ ಬೆಳುವಲ ಎಂಬುದು ದೇಶ. ಆ ದೇಶವೆಂಬ ಹೆಂಗಸಿಗೆ ಮುಖವಿದ್ದ ಹಾಗೆ ಬನವಸೆ ಎಂಬುದು ಪಟ್ಟಣ. ಅಲ್ಲಿ ಯಾವ ಋತುವಿನಲ್ಲಿ ನೋಡಿದರೂ ಹಣ್ಣುಬಿಟ್ಟ ಹಲಸು, ನೇರಿಳೆ, ಮಾವು, ದಾಳಿಂಬರ, ತೆಂಗು, ನಾರಂಗ; ಯಾವ ಮರಬಳ್ಳಿಗಳಲ್ಲಿ ನೋಡಿದರೂ ಗಿಳಿ, ಕೋಗಿಲೆ, ದುಂಬಿ. ಊರಿನ

ಕೇರಿಕೇರಿಯಲ್ಲೂ ತಳಿರು ತೋರಣ, ಸಾರಣೆ ಕಾರಣೆ, ಸುವಾಸನೆಯ ರಂಗವಲ್ಲಿ. ಊರಿನ ತುಂಬ ವೇದಶಾಸ್ತ್ರ ಪುರಾಣಗಳನ್ನು ಓದುವವರು, ಮಹಾ ವೀರರಾಗಿ ಶತ್ರುಗಳನ್ನು ಕಾದಿ ಗೆಲ್ಲುವವರು, ಬೀದಿಬೀದಿಗಳಲ್ಲಿ ಮದದಾನೆಗಳ ಹಿಂಡುಗಳು. ಅಲ್ಲಿಯವರು ನುಡಿವಳಿಯಲ್ಲಿ ಜಾಣರು, ನಡೆವಳಿಯಲ್ಲಿ ಜಾಣರು, ಬೇಡಿದವರಿಗೆ ಬೇಡಿದ್ದನ್ನು ನೀಡುವುದರಲ್ಲಿ ಜಾಣರು.

ಇಂಥ ಅಪೂರ್ವವಾದ ಬನವಸೆಗೆ ಅರಸ—ಮಮಕಾರ ಎಂಬವನು; ಮಹಾ ಪ್ರತಾಪಶಾಲಿ, ಶೂರ, ಸಾಹಸಿ, ಗುಣವಂತ, ಮಹಾ ಉದಾರಿ. ಆತನಿಗೆ ಅನುರೂಪಳಾದ ಪತ್ನಿ—ಮೋಹಿನೀದೇವಿ. ರತಿ ಮನ್ಮಥರಂತೆ, ರೋಹಿಣೀಚಂದ್ರಮರಂತೆ, ಶಚಿಶಚೀಪತಿಯರಂತೆ, ಲಕ್ಷ್ಮೀನಾರಾಯಣರಂತೆ ಆ ದಂಪತಿಗಳು ಅನ್ಯೋನ್ಯವಾಗಿದ್ದರು.

ಅವರು ಮಕ್ಕಳನ್ನು ಬಯಸಿ, ಅನೇಕ ವ್ರತಗಳನ್ನು ನಡೆಸಿದರು. ನೇರವಾಗಿ ಶಿವನ ಕರುಣೆಯನ್ನು ಬೇಡುವುದು ಬಿಟ್ಟು, ಗೌರೀವ್ರತ ಮೊದಲಾದುವನ್ನೂ ನಾನಾ ಶಕ್ತಿದೇವತೆಗಳನ್ನೂ ಅನೇಕ ಜಡ ದೇವತೆಗಳನ್ನೂ ಪೂಜೆ ಮಾಡಿದರು. ಅವರ ಪೂಜೆಗೆ ಅನುಗುಣವಾದ ಫಲವಾಗಿ, ಮಾಯಾದೇವಿಯು ಅವರ ಮಗಳಾಗಿ ಹುಟ್ಟಿದಳು.

ಹೀಗೆ, ಪಾರ್ವತಿಯ ಮದದ ಪ್ರತಿಜ್ಞೆ ಆ ಕಡೆ, ಮಮಕಾರ ಮೋಹಿನಿಯರ ಅಜ್ಞಾನದ ಅರ್ಚನೆ ಈ ಕಡೆ—ಇವುಗಳ ಪರಿಣಾಮವಾಗಿ ಮಾಯಾದೇವಿ ಭೂಮಿಯಲ್ಲಿ ಹುಟ್ಟಿದಳು. ಅದರಿಂದ ಭೂಮಿಯ ಮುನಿಗಳೂ ಸಿದ್ಧರೂ ಯೋಗೀಶ್ವರರೂ ಕಂಗೆಟ್ಟರು, ಅವರ ಚಿತ್ತ ಭ್ರಮಿಸಿತು, ಆಶಾಪಾಶ ತೀವ್ರವಾಯಿತು, ಕಾಮ ಹೆಡೆಯೆತ್ತಿತು. ಊರು ಬಿಟ್ಟು ಕಾಡಿಗೆ ಹೋದವರು, ಗಂಗಾ ತೀರದಲ್ಲೂ ಗಿರಿಗಹ್ವರಗಳಲ್ಲೂ ಘೋರತರ ಗುಹೆಗಳಲ್ಲೂ ಜಲದ ನಡುವೆಯೂ ಪಂಚಾಗ್ನಿ ಮಧ್ಯದಲ್ಲೂ ನಿಂತವರು, ಸುತ್ತಲೂ ಬೆತ್ತಬಿದಿರು ಬೆಳೆದವರು, ಎತ್ತಲೂ ಹುತ್ತ ಹತ್ತಿಕೊಂಡವರು—ಎಲ್ಲರ ಚಿತ್ತವೂ ಚಂಚಲವಾಯಿತು, ಎಲ್ಲರ ನೇಮವೂ

ನೆಲೆಗೆಟ್ಟಿತು. “ಈವರೆಗೆ ಇಲ್ಲದಿದ್ದ ಮಾಯೆ ಈಗ ಎಲ್ಲಿಂದ ತಲೆದೋರಿತು?” ಎಂದು ಎಲ್ಲರೂ ಚಿಂತಾಕ್ರಾಂತರಾದರು.

ಆವೇಳೆಗೆ ಸರಿಯಾಗಿ ದುರ್ವಾಸ ಋಷಿ ಅವರ ಬಳಿಗೆ ಬಂದನು. ಸಿದ್ಧ ಮುನಿ ಯೋಗಿಗಳೆಲ್ಲರೂ ತಮ್ಮ ಸಂಕಟವನ್ನು ಅವರ ಹತ್ತಿರ ಹೇಳಿಕೊಂಡರು. ಅದಕ್ಕೆ ಕಾರಣವೇನೆಂದು ಬೆಸಗೊಂಡರು.

ದುರ್ವಾಸನು ಅವರಿಗೆ ಮಾಯೆಯ ಜನನದ ವೃತ್ತಾಂತವನ್ನು ಸಾಂಗವಾಗಿ ತಿಳಿಸಿದನು. ಪಾರ್ವತಿ ಶಿವನ ಮುಂದೆ ಮಾಡಿದ ಮೂರ್ಖತನದ ಪ್ರತಿಜ್ಞೆಯನ್ನು ಹೇಳಿದನು. “ಇದರಿಂದ ನಿಮಗೇನೂ ಕೇಡಾಗದು. ನೀವು ಅಂಜದಿರಿ” ಎಂದು ಅವರಿಗೆ ಧೈರ್ಯ ಹೇಳಿ, ದುರ್ವಾಸನು ಹೋದನು. ಅವರುಗಳು ತಮತಮಗೆ ತಿಳಿದ ರೀತಿಯಲ್ಲಿ ಮೊದಲಿನ ಹಾಗೆಯೇ ಭಕ್ತಿಯುಕ್ತಿಗಳಿಂದ ತಮ್ಮ ದೇವರನ್ನು ತಾವು ಸಾಧಿಸುತ್ತಿದ್ದರು.

ಇತ್ತ, ಪಾರ್ವತಿಯ ತಾಮಸಕಳೆಯಾದ ಮಾಯೆ ಮಮಕಾರನ ಮನೆಯಲ್ಲಿ ಗಳಿಗೆಗಳಿಗೆಗೂ ಬಹು ಮೋಹಕವಾಗಿ ಬೆಳೆದಳು. ತಾಯಿತಂದೆಯರು ಆ ಮಗುವಿಗೆ ಮಾಯೆ ಎಂದೇ ನವೀನವಾದ ನಾಮಕರಣಮಾಡಿದರು.

ಮಾಯೆ ಮಗುವಾಗಿರುವಾಗ ಅವಳನ್ನು ಮಾಣಿಕ್ಯದ ಹಲಗೆಗಳಿಂದ ಮಾಡಿದ ತೊಟ್ಟಿಲಿನಲ್ಲಿ ಮಲಗಿಸಿದ್ದರು. ಒಂದು ಸಲ ಮಗು ಒಂದು ಮಗ್ಗುಲಾಗಿ ಮಲಗಿ, ಪಕ್ಕದ ಮಾಣಿಕ್ಯದ ಹಲಗೆಯಲ್ಲಿ ತನ್ನ ಪ್ರತಿಬಿಂಬವನ್ನು ಕಂಡಿತು. ಅದೂ ಒಂದು ಬೇರೆ ಮಗು ಎಂದು ಭಾವಿಸಿ, ನಲಿಯುತ್ತಾ ನಗುತ್ತಾ, ಆ ಮಗುವನ್ನು ಹಿಡಿಯಲು ಕೈನೀಡಿತು. ಕೈಗೆ ಆ ಮಗು ಸಿಕ್ಕದಿರಲು, ಅಸಮಾಧಾನವಾಗಿ, ಅದನ್ನು ಒದೆಯಬೇಕೆಂದು ಕಾಲು ಝಾಡಿಸಿತು. ಆಗ, ಕಾಲಿಗೆ ಕಟ್ಟಿದ್ದ ಗೆಜ್ಜೆ ಸದ್ದಾಯಿತು. ಮಗು ಎಲ್ಲವನ್ನೂ ಮರೆತು, ಆ ಗೆಜ್ಜೆಯ ಸದ್ದನ್ನು ಕೇಳುತ್ತ ಹಾಗೇ ಮಲಗಿತು.

ಮಾಯೆ ಮಗುವಾಗಿದ್ದಾಗ, ಆಡಿಸುವ ದಾದಿಯರು ಸಂಜ್ಞೆ ಮಾಡಿದ ಹಾಗೆಲ್ಲಾ ಆಡುತ್ತಿರುವಳು. ಇದ್ದಕ್ಕಿದ್ದ ಹಾಗೆ ಓಡಿಬಂದು, ತಾಯನ್ನು ತಬ್ಬಿಕೊಳ್ಳುವಳು; ಅವಳ ಸೀರೆಯ ಸೆರಗಿನಲ್ಲಿ ಅಡಗಿಕೊಳ್ಳುವಳು. ಅಲ್ಲಿಂದ ಇಣಿಕಿನೋಡಿ, ಅವಳ ಕೈಯನ್ನು ಮುದ್ದಾಡಿ, ಅವಳ ಮುಂದಲೆ ಹಿಡಿದು ಕುಣಿಕುಣಿದಾಡಿ, ತಾಯಿ ಮೋಹಿನಿಗೆ ಸುಖ ಕೊಡುವಳು.

ಮಾಯೆ ಮಗುವಾಗಿರುವಾಗ ಹಂಸವನ್ನು ಹಿಡಿದು ಅದಕ್ಕೆ ನಡೆಯುವುದನ್ನು ಕಲಿಸಿದಳು, ಅರಗಿಳಿಗೆ ಮಾತನಾಡುವುದನ್ನು ಕಲಿಸಿದಳು ಅರಮನೆಯ ಕೋಗಿಲೆಗೆ ಹಾಡಲು ಕಲಿಸಿದಳು. ಮಾಯೆ ಆ ಪಕ್ಷಿಗಳಿಗೆ 'ಮೇಷ್ಟರುತನ' ಮಾಡುತ್ತಿದ್ದುದು ತುಂಬ ಮುದ್ದಾಗಿತ್ತು.

ಮಾಯೆ ಮಗುವಾಗಿರುವಾಗ ಆಡಿದ ಇಂಥ ಬಾಲಲೀಲೆಗಳು ಎಷ್ಟೋ!

ಹೀಗೇ ಆ ಮಗು ಹುಡುಗಿಯಾಗಿ, ಹುಡುಗಿ ಕನ್ಯೆಯಾಗಿ, ನಾನಾ ಕುಶಲಶಾಸ್ತ್ರಗಳನ್ನೂ ವಿದ್ಯೆಗಳನ್ನೂ ಕಲಿತು ಅಂತಃಪುರದಲ್ಲಿರುತ್ತಿರಲಾಗಿ, ತಂದೆಯು ಅವಳಿಗೆ ಮದುವೆ ಮಾಡಬೇಕೆಂದು ಚಿಂತಿಸಿದನು.

ಅದೇ ವೇಳೆಗೆ ಅವರ ಮನೆತನಕ್ಕೆ ಗುರುವಾದ ಅಹಂಕಾರಾಚಾರ್ಯನು ಅಲ್ಲಿಗೆ ಬಂದನು. ಅರಸನ ಸತ್ಕಾರವನ್ನು ಕೈಕೊಂಡು, ಆತನ ಕ್ಷೇಮಕುಶಲವನ್ನು ಕೇಳಿಯಾದ ಮೇಲೆ, ಬಳಿಯಲ್ಲಿ ನಿಂತ ಮಾಯೆಯನ್ನು ನೋಡಿದನು. ಅವಳ ರೂಪರೇಖೆಗಳಿಂದ 'ಇವಳು ಕಾರಣಕನ್ಯೆ' ಎಂಬುದನ್ನು ಕಂಡನು. ದೊರೆಗೆ ಹೇಳಿದನು: “ಹಣ್ಣು ಬಿಟ್ಟ ಮಾವಿನ ಮರ ಕೋಗಿಲೆಗೆ ಹೇಗೋ, ಹಾಲು ಹಂಸಕ್ಕೆ ಹೇಗೋ, ಹೂ ದುಂಬಿಗೆ ಹೇಗೋ, ಹಾಗೇ ಈ ಕನ್ಯೆ ಸಾಕ್ಷಾತ್ ಶಿವನಿಗೆ ತಕ್ಕವಳಲ್ಲದೆ, ಸಾಮಾನ್ಯ ಮನುಷ್ಯರು ಇವಳಿಗೆ ಅರ್ಹರಲ್ಲ.”

ಮಾನವನ ಮಗಳಾದ ಮಾಯೆಗೆ ಕೈಲಾಸಪತಿಯು ಹೇಗೆ ವರನಾದಾನೆಂದು ದೊರೆ ಶಂಕೆಪಟ್ಟನು. ಅದಕ್ಕೆ ಗುರು "ಮಾನವರಿಗೂ ಶಿವನು ಸಾಧ್ಯ. ಶಿವಭಕ್ತಿಯನ್ನು ಮಾಡಿದರೆ, ಶಿವನು ಅವರಿಗೆ ಅವರ ಇಚ್ಛೆಯನ್ನು ಕೊಡುತ್ತಾನೆ." ಎಂದು ಹೇಳಿ, ಮಾಯೆಗೆ ಉಪದೇಶವನ್ನು ಮಾಡಿ, ದೊರೆಯನ್ನು ಹರಸಿ, ತನ್ನ ಸ್ವಸ್ಥಳಕ್ಕೆ ಅಹಂಕಾರಾಚಾರ್ಯನು ಹೋದನು.

ಇತ್ತ, ಮಾಯಾದೇವಿ, ಶಿವನೇ ತನಗೆ ಪತಿಯಾಗಬೇಕೆಂದು ಬಯಸಿ ನಿಯಮಗಳನ್ನು ಕೈಕೊಂಡಳು ಆ ಊರಿಗೆ ಮುಖ್ಯದೈವ ಮಧುಕೇಶ್ವರ. ಮಾಯೆ ನಿತ್ಯವೂ ಮಧುಕೇಶ್ವರನನ್ನು ಪೂಜಿಸಿದಳು. ಅಕ್ಷತೆ, ಗಂಧ, ಜಲ, ತಾಂಬೂಲ, ದೀಪ, ಧೂಪ, ನೈವೇದ್ಯ, ಬಿಲ್ವಪತ್ರೆ ಎಂಬ ಎಂಟು ವಿಧವಾದ ಅರ್ಚನೆ ಮಾಡಿದಳು. ಹಾಗೆಯೇ ಎಂಟುವಿಧದ ಉಪಚಾರಮಾಡಿದಳು. ಪತಿಭಿಕ್ಷೆಗಾಗಿ ಪ್ರಾರ್ಥಿಸಿದಳು.

ಮಾಯೆಯ ಪೂಜೆಗೆ ಪ್ರಭುದೇವರು ಪ್ರಸನ್ನರಾದರು. "ಈಕೆ ಕಾಮಸಹಿತವಾದ ಪ್ರೇಮದ ಭಕ್ತಿಯನ್ನು ಮಾಡಿದ ಕಾರಣದಿಂದ, ಇವಳ ಕಾಮಿತಾರ್ಥವನ್ನು ನಾನು ಸಲ್ಲಿಸಬೇಕು." ಎಂದು, ತಮ್ಮ ಸಹಜವಾದ ರೂಪವನ್ನೂ ಹೆಸರನ್ನೂ ಮರೆಮಾಡಿ, ಅಭಿನವ ಕಾಮನ ರೂಪಿನಿಂದ ಕಾಣಿಸಿಕೊಂಡರು. ಚೆಲುವಾದ ಮುಖ, ಶುಭ್ರವಾದ ದಂತಪಂಕ್ತಿ, ತೊಳಗುವ ಕಣ್ಣು, ಸುಷ್ಠುವಾದ ದೇಹ, ಕೋಮಲವಾದ ಕೈಕಾಲು, ಇಂತಹ ಸೌಮ್ಯಸುಂದರ ವೇಷವನ್ನು ಪ್ರಭು ಧರಿಸಿದರು. ತುರುಬನ್ನು ಸುತ್ತಿ ಗಂಟು ಹಾಕಿ, ಹಿಂದೆ ಕುಚ್ಚು ಬಿಟ್ಟರು; ಕಾಸೆಯನ್ನು ಕಟ್ಟಿ, ನಿರಿ ಬಿಟ್ಟರು; ತೆಳ್ಳನೆ ಒಲ್ಲಿ ಹೊದೆದರು; ಚಿನ್ನದ ಆಭರಣ ಧರಿಸಿದರು; ಸುಗಂಧವನ್ನು ಲೇಪಿಸಿಕೊಂಡರು; ಬೆನ್ನಿನಲ್ಲಿ ಮದ್ದಳೆಯನ್ನು ಹಾಕಿಕೊಂಡು, ವೇಷ ಕಟ್ಟಿಬಂದರು.

ಮಧುಕೇಶ್ವರನ ದೇವಾಲಯದ ಬಾಗಿಲಿಗೆ ಬಂದರು. ನಾನಾ ಪ್ರಕಾರವಾದ ತಾಳಗಳನ್ನು ಮದ್ದಳೆಯ ಮೇಲೆ ನುಡಿಸಿದರು.

ಪ್ರಭುವಿನ ಮದ್ದಳೆಯ ಧ್ವನಿ ಮಾಯೆಯ ಕಿವಿಗೂ ಬಿತ್ತು. ಮಳೆಯ ಮೋಡದ ಗರ್ಜನೆಯನ್ನು ನಿರೀಕ್ಷಿಸಿ, ಕಿವಿಯಾರೆ ಕೇಳಿದ ಹೆಣ್ಣುನವಿಲಂತೆ ಆಕೆ ಸಂಭ್ರಮಿಸಿದಳು. "ಹೊರಗೆ ಮದ್ದಳೆ ಬಾರಿಸುವವರು ಯಾರು?" ಎಂದು ಕೆಳದಿಯರನ್ನು ಕೇಳಿದಳು.

ಕೆಳದಿಯರು ತಾವು ಹೋಗಿ ತಿಳಿದುಬಂದು, ತಿಳಿಸಿದರು. ಕೂಡಲೆ ಮಾಯೆ ಅವನನ್ನು ಕರೆಸಿದಳು. ಕಂಡ ಕೂಡಲೆ ಮಾಯೆ ಆ ಮದ್ದಳೆಯವನಿಗೆ ಮನಸ್ಸು ಸೋತಳು.

ಕೆಳದಿಯರು ಮಾಯೆಯ ಇಂಗಿತದಂತೆ ಆತನನ್ನು ಕೇಳಿದರು: "ನಿನ್ನದು ಯಾವ ದೇಶ? ನಿನಗೇನು ಹೆಸರು? ನಿನ್ನ ವಾಸ ಎಲ್ಲಿ?"

ಅದಕ್ಕೆ ಪ್ರಭು ನಸುನಗುತ್ತ ಉತ್ತರಿಸಿದರು: "ನಮ್ಮ ದೇಶ ಪರದೇಶ. ಎಂಥೆಂಥವರನ್ನೂ ಅಲ್ಲವೆನಿಸುವ ಕಾರಣದಿಂದ ನಮಗೆ ಅಲ್ಲಮನೆಂದು ಹೆಸರು. ಲೇಸಾದುದನ್ನು ಮಾಡುವ ಎಡೆಗಳಲ್ಲಿ ನಾವು ಅಭಿಲಾಷೆಯಿಲ್ಲದೆ ವಾಸಮಾಡುವೆವು."

ಸಖಿಯರೆಂದರು: "ಹಾಗಾದರೆ, ಒಳ್ಳೆಯದಾಯಿತು. ನೀನು ಇನ್ನು ಅಲ್ಲಿಗೆ ಇಲ್ಲಿಗೆ ಹೋಗುವುದು ಬೇಡ. ಸುಖವಾಗಿ ನಮ್ಮ ಒಡತಿಯ ಸಮೀಪದಲ್ಲಿ, ನೀನು ತಿಳಿದದ್ದನ್ನು ಬಾರಿಸಿಕೊಂಡು, ನಮ್ಮ ಹಾಗೆಯೇ ಇದ್ದುಬಿಡು!"

ಅಲ್ಲಮನು ಆಗಬಹುದೆಂದನು.

ಮಾಯೆ ಮಧುಕೇಶ್ವರನಿಗೆ ಶರಣು ಹೇಳಿ ಹೊರಟಳು. ಅಲ್ಲಮನನ್ನು ತಂದೆಯ ಬಳಿಗೆ ಒಯ್ದು ಪರಿಚಯಮಾಡಿಸಿ, ಅವನನ್ನು ತನ್ನ ನಾಟ್ಯಶಾಲೆಯ ಮೇಳಕ್ಕೆ ಮದ್ದಳೆಯವನನ್ನಾಗಿ ನೇಮಿಸಿಕೊಂಡಳು. ಅಂದಿನಿಂದ, ಅಂತಃಪುರದ ದೊಡ್ಡ ಮಂಟಪದಲ್ಲಿ ಓಲಗಕೊಟ್ಟು ಭರತವಿದ್ಯೆಯನ್ನು ಪರಿಚಯಮಾಡಿಕೊಳ್ಳುವ ನೆಪದಲ್ಲಿ, ಮಾಯೆ ಅಲ್ಲಮನನ್ನು ಬೇಕಾದಂತೆ ಮಾತನಾಡಿಸುವಳು.

ಮಾಯೆಯ ಮಂಕುತನವನ್ನು ಎಷ್ಟು ಹೇಳಿದರೂ ತೀರದು. ಅಮೃತದ ಸೋನೆ ಸುರಿಯುತ್ತಿರುವ ಕಾಲದಲ್ಲಿ ತಿಂದು ತೇಗಿ ತೃಪ್ತಿ ಪಡೆಯುವ ಬುದ್ಧಿಯಿಲ್ಲದೆ ಹಸಿವಿಗಾಗಿ ಕೃಷಿಮಾಡಿ ಕಷ್ಟಬೀಳುವ ದಡ್ಡನ ಹಾಗೆ—ಸಂತೋಷದಿಂದ ಪ್ರಭುದೇವರು ಕರುಣಿಸಿಕೊಡಲು ಬಂದಿರುವ ಕಾಲದಲ್ಲಿ ಶಿವತತ್ತ್ವವನ್ನು ತಿಳಿಯಲು ತೋಚದೆ, ಮಾಯೆ ಕಾಮಕ್ಕೆ ಗುರಿಯಾಗಿ ಕೋಟಲೆಸಡುತ್ತಿದ್ದಳು.

ಮಾಯೆ ಮದನನ ಬಲೆಗೆ ಬಿದ್ದದ್ದನ್ನು ಸಖಿಯರು ತಿಳಿದರು. "ಒಡತಿ, ನಿನ್ನ ಮನದ ಬಯಕೆಯನ್ನು ನಾಚದೆ ನಮಗೆ ಹೇಳು. ಅಲ್ಲಮನು ಇಲ್ಲೇ ನಿಲ್ಲುವಂತೆ ನಾವು ಏರ್ಪಾಟುಮಾಡುತ್ತೇವೆ." ಎಂದರು.

ಆದರೆ, ಮಾಯೆಗೆ ಮೊದಲನೆಯದಾಗಿ ನಾಚಿಕೆ; ಎರಡನೆಯದಾಗಿ, ತಾನು ರಾಜನ ಮಗಳೆಂಬ ಹೆಮ್ಮೆ; ಮೂರನೆಯದಾಗಿ, ತನಗೆ ಅನುರೂಪನಲ್ಲದ ಮನುಷ್ಯನಿಗೆ ಬಯಸಿದೆನೆಂಬ ಬಿಂಕ. ಮಾತನಾಡದೆ ಸುಮ್ಮನಿದ್ದಳು.

"ಸರಿ, ಇವಳನ್ನು ಕೇಳುವುದೇನು? ಅವನನ್ನೇ ಕೇಳಿದರಾಯಿತು!" ಎಂದುಕೊಂಡು, ಆ ಸಖಿಯರು ಮದಮಾನಿಯೆಂಬ ವಿವೇಕಿಯನ್ನು ಅಲ್ಲಮನ ಬಳಿಗೆ ಕಳುಹಿದರು.

ಮದಮಾನಿ ಬಂದದ್ದು ಏಕೆಂದು ಅಲ್ಲಮ ಅರಿಯನೆ! "ಇವಳಿಗೆ ನಾನೇ ದಾರಿ ತೋರಿಸುತ್ತೇನೆ" ಎಂದು, "ನಾವು ಇನ್ನು ನಮ್ಮ ಬಿಡಾರಕ್ಕೆ ಹೋಗುತ್ತೇವೆ. ನಮ್ಮನ್ನು ಹುಡುಕುವುದಾದರೆ, ಹೋದೆವೆಂದು ನಿಮ್ಮ ಒಡತಿಗೆ ಹೇಳಿ," ಎಂದನು.

"ಸಾಕು, ಬಿಡು, ನಿನಗೇಕೆ ಬೇರೆ ಬೀಡಿನ ಮನೆ? ನಮ್ಮ ಒಡತಿಗೆ ನಿನ್ನ ಮೇಲೆ ಮೋಹವಾಗಿದೆ. ನೀನು ಸುಖವಾಗಿ ಇಲ್ಲೇ ಇದ್ದುಬಿಡು." ಎಂದಳು, ಮದಮಾನಿ.

"ನಾವು ಪರದೇಶಿಗಳು, ಬಡವರು; ನೀವಾದರೋ ದೊರೆಗಳು. ನಿಮ್ಮ ದೇವಿ ರಾಜಕುಮಾರಿ, ನಾನಾದರೋ ಪುರುಷವೇಷದವ. ಹೆಂಗಸರ ನಡುವೆ ಇರುವುದು

ನಮಗೆ ಯಾವ ಮರಿಯಾದೆ? ದೂರದ ಸೇವೆ ನಮಗೆ ಉಚಿತ.” ಎಂದ ಅಲ್ಲಮ, ನಗುತ್ತ.

“ಇದು ನಗೆಯ ಮಾತಲ್ಲಣ್ಣ. ಮಾಯೆ ನಿನ್ನನ್ನು ಸೇವಾವೃತ್ತಿಗೆ ನೇಮಿಸಬೇಕೆಂದಿಲ್ಲ. ನಿನ್ನನ್ನು ತನಗಿಂತ ಹೆಚ್ಚಾಗಿ ಕಾಣಬೇಕೆಂದಿದ್ದಾಳೆ.” ಎಂದು ಮದಮಾನಿ ಅಲ್ಲಮನಿಗೆ ಆಸೆ ತೋರಿದಳು.

“ಸೇವಕರ ಮೇಲೆ ಒಡತಿಯರಿಗೆ ವಿಶ್ವಾಸವಾಗುವುದು ತಪ್ಪಲ್ಲ. ಆದರೆ ನಾವು ನಮ್ಮ ಸೇವಕತನದ ಭಾವವನ್ನು ಮರೆಯುವುದು ಸರಿಯಲ್ಲ.” ಎಂದ, ಅಲ್ಲಮ.

“ಈ ಜಾಣತನದ ಮಾತು ಸಾಕು. ದೇವ ದಾನವ ಮಾನವರುಗಳನ್ನು ಸೋಲಿಸಬಲ್ಲ ನಮ್ಮ ಮಾಯೆ ನಿನಗೆ ಸೋತಿದ್ದಾಳೆ. ಸುಮ್ಮನೆ ಬಾ.” ಎಂದಳು ಮದಮಾನಿ.

“ಸರಿ. ನಿಮ್ಮ ಮಾಯಾದೇವಿಯ ಮನಸ್ಸು ನಿಮಗೆ ಗೊತ್ತು; ನಾವೇನು ಬಲ್ಲೆವು? ಆದ್ದರಿಂದ ನಿಮ್ಮ ಮನಸ್ಸು ಬಂದಂತೆ ನೀವು ಮಾಡಿ ನಮ್ಮನ್ನು ಕೇಳುವ ಕೆಲಸವೇನು?” ಎಂದ, ಅಲ್ಲಮ.

ಮದಮಾನಿ, ಬಂದ ಕೆಲಸವಾಯಿತೆಂದು ಹಿಗ್ಗುತ್ತ ಹಿಂದಿರುಗಿದಳು. ಕತ್ತಲೆಯನ್ನೂ ಸೂರ್ಯನನ್ನೂ ಒಂದು ಕಡೆ ಕೂಡಿಸುತ್ತೇವೆ ಎಂದು ಹೊರಟ ಮರುಳುಗಳಂತೆ, ಮಾಯೆಯ ಸಖಿಯರು ಮಾಯೆಗೂ ಅಲ್ಲಮನಿಗೂ ಒಂದೇ ಕಡೆ ಬೀಡುಮಾಡಿದರು. ಆದರೆ, ’ಅಲ್ಲಮ’ ಎಂಬ ಹೆಸರಿನಿಂದ ಬಂದ ಪ್ರಭುದೇವರು ಇಂತಹ ಕಳವಳದ ವಿಷಯಗಳ ಗೋಜಿಗೆ ಸಿಕ್ಕುವವರಲ್ಲ, ಆಕಾಶವು ಮಳೆಗೆ ಹೇಗೆ ನೆನೆಯುವುದಿಲ್ಲವೋ, ಗಾಳಿಗೆ ಹೇಗೆ ಅಲುಗುವುದಿಲ್ಲವೋ, ಬೆಂಕಿಗೆ ಹೇಗೆ ಉರಿಯುವುದಿಲ್ಲವೋ ಹಾಗೆಯೇ ಪ್ರಭು ಮಾಯೆಯ ಯಾವ ಆಟಕ್ಕೂ ಅಂಟದೆ ಬಯಲಿನಂತೆ ಇದ್ದರು!

ಮದ್ದಳೆಯವನು ಮಗಳ ಅಂತಃಪುರದಲ್ಲೇ ಮನೆ ಮಾಡಿದ್ದನ್ನು ಮೋಹಿನೀದೇವಿ ಕೇಳಿದಳು. ಮಗಳ ಮನೆಗೆ ಬಂದು, ಅವಳ ಆಪ್ತ ಸಖಿಯರನ್ನು ವಿಚಾರಿಸಿದಳು. "ಮಗಳೆ, ಇವು ನಿನಗೆ ಅಯುಕ್ತವಲ್ಲವೆ? ರಾಜಕುಲದವರು ಇದನ್ನು ಕೇಳಿದರೆ, ನಗದಿರುವರೆ? ನಿನ್ನ ತಂದೆಗೆ ತಿಳಿದರೆ, ಏನೆಂದಾರು? ಹೀಗೆ ಅಪವಾದಕ್ಕೆ ಗುರಿಯಾಗಬಹುದೆ?" ಎಂದಳು. "ನೀವಾದರೂ ಸಖಿಯರು ಇವಳಿಗೆ ಬುದ್ಧಿ ಹೇಳಬಾರದಾಗಿತ್ತೆ?" ಎಂದು ಆಕ್ಷೇಪಿಸಿದಳು. "ಮಗಳಿಗೆ ಈ ದುರ್ಬುದ್ಧಿ ಏಕೆ ಬಂತೋ? ಈ ಅಲ್ಲಮನಾದರೂ ಇಲ್ಲಿಗೆ ಎಲ್ಲಿಂದ ಏಕೆ ಬಂದನೋ?" ಎಂದು ಪೇಚಾಡಿದಳು.

ಆಗ ಸಕಳೆ ಎಂಬ ಸಖಿ ಹೇಳಿದಳು: "ಅರಸಿಯರಿಗೆ ನಾವು ಎದುರಾಡಬಾರದು. ಆದರೆ ಅಲ್ಲಮನನ್ನು ಕಂಡು ಸೋತ ಮಾಯೆ, ಅಲ್ಲಮನು ಇಲ್ಲಿಗೆ ಬಂದದ್ದರಿಂದ, ಜೀವದಿಂದುಳಿದಳು. ಮನುಷ್ಯ ದೇಹವನ್ನು ಪಡೆದು, ಅದರಲ್ಲೂ ರಾಜನ ಮಗಳಾಗಿ, ಸಾಲದ್ದಕ್ಕೆ ಸೊಗಸಾದ ಆರೋಗ್ಯ ಇರುವಾಗ—ಅವಳನ್ನು ಅಡ್ಡಿಪಡಿಸುವುದು ಏಕೆ? ಮಾಯೆ ಮನಸ್ಸು ಬಂದ ಹಾಗಿರಲಿ, ಬಿಡಿ!" ಎಂದಳು.

ಮಗಳ ಮೇಲಿನ ಮೋಹದಿಂದ ಅರಸಿಯೂ ಅದಕ್ಕೆ ಹೂಂ ಗುಟ್ಟಿದಳು. "ನೀವು ಹೇಳುವ ಮಾತೂ ನಿಜವೇ. ನೀವೇನು ಆಗದವರೇ? ಆಗಲಿ, ಮಗಳು ಮನಸ್ಸು ಬಂದ ಹಾಗಿರಲಿ. ಆದರೆ ಒಂದೇ, ಜೋಕೆ. ಅರಸರಿಗೆ ಮಾತ್ರ ಇದೊಂದೂ ತಿಳಿಯದೆ ಇರಲಿ." ಎಂದು ಹೇಳಿ, ಹೊರಟುಹೋದಳು.

ಸಖಿಯರು ಸ್ವಲ್ಪ ಹೆದರಿದರು. ಸಕಳೆ ಹೇಳಿದಳು: "ಒಡತಿ, ನಾವು ಮಾಡಿದ್ದು ನಮ್ಮ ರಾಣಿಗೆ ಮಾತ್ರ ತಿಳಿದದ್ದರಿಂದ ನಾವು ಇಷ್ಟರಲ್ಲೆ ಬದುಕಿದೆವು. ದೊರೆಗೆ ತಿಳಿದರೆ,

ನಮ್ಮ ಕಥೆ ಮುಗಿಯಿತು. ಇನ್ನು ನಮ್ಮ ಮಿತಿಯಲ್ಲಿ ನಾವಿರಬೇಕು. ಇನ್ನು ಈ ಅಲ್ಲಮ ಬೇರೆ ಬೀಡಿನಲ್ಲಿರಲಿ.”

ಆ ಮಾತು ಕೇಳಿ, ಮಾಯೆ ಚಿಂತೆಯಿಂದ ಕುಸಿದುಹೋದಳು. ಅವಳ ಚಿಂತೆಗೆ ಕಾರಣವನ್ನು ತಿಳಿದೂ ತಿಳಿಯದಂತೆ ಬಂದು, ಅಲ್ಲಮನು ಸಕಳೆಯನ್ನು ಪ್ರಶ್ನಿಸಿದನು: “ಸಕಳೆ, ಮಾಯೆಗೆ ಇದು ಏನು ದುಃಖ? ಯಾರಿಂದ?”

ಸಕಳೆ ಹೇಳಿದಳು: “ಮಾಯೆಯ, ನಿನ್ನ ಮನೆವಾರ್ತೆ ಅರಮನೆಯಲ್ಲಿ ಒಡತಿ ಮೊದಲಾಗಿ, ಮಹಾರಾಜ ಒಬ್ಬ ಹೊರತು, ಎಲ್ಲರಿಗೂ ಗೊತ್ತಾಗಿದೆ. ರಾಜರಿಗೆ ತಿಳಿಯದ್ದು ನಮ್ಮ ಪುಣ್ಯ. ಈ ರೀತಿಯ ರಟ್ಟು ಸಾಕು. ಇನ್ನು ನೀನು ಬೇರೆ ಕಡೆ ಬೀಡುಮಾಡುವುದು ಲೇಸು.”

ಆಗ ಅಲ್ಲಮನು ಮಾಯೆಯ ಅಗಲಿಕೆಯಿಂದ ತನಗೆ ಜೀವವೇ ಹೋಯಿತೆಂಬಂತೆ ನಟಿಸುತ್ತ, “ಮಾಯೆ ಹೋದ ಬಳಿಕ ದೇಹವೆಲ್ಲಿ ನಿಲ್ಲುವುದು? ಪ್ರಾಣವಾಯುವಿನ ಗತಿ ಏನು? ಕೈಕಾಲುಗಳ ಚಲನೆ ಹೇಗೆ? ಮಾತು ವ್ಯವಹಾರಕಾರ್ಯಗಳು ಮತ್ತೆಂತು? ಮಾಯೆ ನನ್ನನ್ನು ಬಿಟ್ಟಮೇಲೆ, ನಾನು ಸಾಯದಂತೆ ಸತ್ತೆ!” ಎಂದನು.

ಆ ಮಾತಿನ ಚಮತ್ಕಾರದ ಮರೆಯಲ್ಲಿ ಶಿವನಿಗೂ ಕಾಮಕ್ಕೂ ಇರುವ ಸಂಬಂಧವನ್ನು ಕುರಿತ ತತ್ತ್ವವಿರುವುದನ್ನು ಸಕಳೆ ಕಾಣಲಿಲ್ಲ. ’ಏನೋ ಲೋಕಾಭಿರಾಮವಾಗಿ ಮಾತಾಡುತ್ತಿದ್ದಾನೆ’ ಎಂದುಕೊಂಡು, “ಮುಂದೆ, ನಿನಗೂ ಮಾಯೆಗೂ ಋಣಸಂಬಂಧವಿರುವುದಾದರೆ, ನೀವೇ ಮತ್ತೆ ಕೂಡುವಿರಿ!” ಎಂದು ಅಲ್ಲಿಂದ ಮೆಲ್ಲನೆ ಜಾರಿದಳು.

ಅಂದಿನಿಂದ ಅಲ್ಲಮನು ಬೇರೆ ಬಿಡಾರದಲ್ಲಿ ನಿಂತನು. ನಾಟ್ಯದ ಮೇಳದವರ ಜೊತೆಗೆ ಮದ್ದಳೆಯವನಾಗಿ ಮಧುಕೇಶ್ವರನ ಸನ್ನಿಧಿಗೆ ಹೋಗುವನು,

ಮಾಯಾಂಗನೆಯ ಶೃಂಗಾರದ ಕುಣಿತಕ್ಕೆ ಹೊಂದುವ ಹಾಗೆ ಮದ್ದಳೆ ನುಡಿಸುವನು. ಅವಳ ಕಾಮದ ಭಕ್ತಿಗೆ ತಕ್ಕಂತೆ ತಾನು ಈ ರೀತಿಯಾಗಿ ಅವಳಿಗೆ ಒಲಿದನು.

ಅತ್ತ, ಕೈಲಾಸದಲ್ಲಿ ಪಾರ್ವತಿ ಮಾಯೆಗಾಗಿ ಕಾದು ಸಾಕಾಯಿತು. "ಬಹಳ ದಿನಗಳಾದುವಲ್ಲಾ. ಮಾಯೆ ಏನಾದಳು, ನೋಡಿ ಬಾ." ಎಂದು ದೇವಿ ತನ್ನ ಬಳಿಯಿಂದ ವಿಮಲೆಯೆಂಬವಳನ್ನು ಕಳುಹಿದಳು.

ವಿಮಲೆ ವೇಗದಿಂದ ಬಂದು ಮಾಯೆಯ ಕನ್ಯಾಂತಃಪುರವನ್ನು ಹೊಕ್ಕಳು. ಮಾಯೆ ಅವಳನ್ನು ಸಂತೋಷದಿಂದ ಸತ್ಕರಿಸಿ, "ಚಂದ್ರಮುಖಿ, ನೀನು ಯಾರು? ಎಲ್ಲಿಂದ ಬಂದೆ? ನಿನ್ನ ಹೆಸರೇನು?" ಎಂದು ಕೇಳಿದಳು.

ವಿಮಲೆ ಹೇಳಿದಳು: "ಗೆಳತಿ! ನಿನ್ನನ್ನು ಕಂಡುಬರುವುದಕ್ಕಾಗಿ ಅಂಬಿಕೆಯು ನನ್ನನ್ನು ರಜತಾದ್ರಿಯಿಂದ ಕಳಿಹಿದ್ದಾಳೆ. ನಾನು ವಿಮಲೆ. ನೀನು ಭೂಮಿಯಲ್ಲಿ ಹುಟ್ಟಿ, ಮರೆತುಹೋಗಿದ್ದರೆ, ನಿನಗೆ ಪೂರ್ವಕಥೆಯನ್ನು ಜ್ಞಾಪಿಸುತ್ತೇನೆ, ಕೇಳು. ಪರಮೇಶ್ವರನ ನಿಜ ಸ್ವರೂಪವನ್ನು ಅಲ್ಲಮನ ಮೂಲಕ ತಿಳಿದುಬರಬೇಕೆಂದು ಪಾರ್ವತಿ ತನ್ನ ಕಳೆಯಾದ ನಿನ್ನನ್ನು ಭೂಮಿಗೆ ಕಳುಹಿಸಿದಳು. ನೀನು ಬರುವುದು ತಡವಾದ್ದನ್ನು ಕಂಡು, ನಿನ್ನನ್ನು ಎಚ್ಚರಿಸಿ ಒಡನೆ ತರುವುದಕ್ಕೆ ಈಗ ನನ್ನನ್ನು ಕಳಿಹಿದ್ದಾಳೆ." ಎಂದಳು.

ಆಗ ಮಾಯಾಂಗನೆಗೆ ತನ್ನ ಜನ್ಮದ ಪೂರ್ವಕಾರಣವೆಲ್ಲಾ ಸ್ಪಷ್ಟವಾಯಿತು. ನಿರ್ಮಲರಾದವರ ಸಂಗವಾದರೆ ಮನಸ್ಸಿನ ಮೈಲಿಗೆ ಕಳೆದುಹೋಗುತ್ತದೆ, ಎಂಬ ಮಾತು ಸುಳ್ಳಲ್ಲ! "ಭೂಮಿಯಲ್ಲಿ ಹುಟ್ಟಿದ ಹರಿಹರಬ್ರಹ್ಮಾದಿಗಳಿಗೇ ಹಿಂದಿನ ಸಂಗತಿ ಮರೆತು ಹೋಗುತ್ತದಂತೆ! ಇನ್ನು ನಮ್ಮಂಥ ಹೆಂಗಸರ ಪಾಡೇನು? ಒಳ್ಳೆಯದು. ಈ ಅಲ್ಲಮ ಎಂಥವನಂತೆ, ಹೇಳು." ಎಂದು ಮಾಯೆ ಕೇಳಿದಳು.

ವಿಮಲೆ ಅಲ್ಲಮನ ಕಥೆಯನ್ನು ಹೇಳಿದಳು. ಹಿಂದೆ ಸುಜ್ಞಾನಿ ನಿರಹಂಕಾರರು ತಪಸ್ಸು ಮಾಡಿದ್ದನ್ನೂ, ಅವರಿಗೆ ಒಬ್ಬ ಶಿವಜ್ಞಾನಿ ಮಗನಾದುದನ್ನೂ, ಆ ಮಗನೇ ಮಹಾಪ್ರಭು ಅಲ್ಲಮನೆನಿಸಿದ್ದನ್ನೂ ಬಿಡಿಸಿ ಬಿಡಿಸಿ ಹೇಳಿದಳು. "ಹರನಲ್ಲಿ ಭಕ್ತಿಯನ್ನು ಮಾಡಿದರೆ, ಅಲ್ಲಮಪ್ರಭು ಕರುಣದಿಂದ ಕಾಣಿಸಿಕೊಳ್ಳುವನು. ಬಳಿಕ ಆತನಲ್ಲಿ ನೀನು ಬೇಕಾದ್ದನ್ನು ಕೇಳಿ ಪಡೆಯಬಹುದು." ಎಂದಳು.

"ಹೆಣ್ಣೆ! ನೀನು ಹೇಳುವುದಕ್ಕೆ ಮೊದಲೇ ನಾನು ಭಕ್ತಿಯಿಂದ ಮಧುಕನಾಥನನ್ನು ನಿತ್ಯವೂ ವಿಧಿವತ್ತಾಗಿ ಪೂಜಿಸುತ್ತಿದ್ದೇನೆ. ಇನ್ನು ಹೆಚ್ಚೇನು ಮಾಡಲಿ?" ಎಂದು ಮಾಯೆ ಬೇಸರಪಟ್ಟಳು.

ಅದಕ್ಕೆ ವಿಮಲೆ ಹೇಳಿದಳು: "ಹಾಗೆಂದರೇನು? ನಿನಗೆ ಸರಿಯಾದ ಉಪದೇಶವಿಲ್ಲವೋ? ಅಥವಾ, ಮಂತ್ರದಲ್ಲಿ ಏನಾದರೂ ದೋಷವೋ? ಇಲ್ಲವೆ, ಆಚಾರದಲ್ಲಿ ಲೋಪಗಳೋ? ಬುದ್ದಿಯಿಲ್ಲದೆ, ಹರನ ಭಕ್ತಿ ನಿರರ್ಥಕ ಎಂದು ಹೇಳಬೇಡ, ಮಾಯೆ!" ಎಂದಳು, ವಿಮಲೆ.

ಮಾಯೆಗೆ ಆ ಮಾತು ಮನಸ್ಸಿಗೆ ಸೊಗಸಲಿಲ್ಲ. "ನನಗೆ ಈ ಮಂತ್ರ ತಂತ್ರ ಆಚಾರ ಒಂದೂ ತಿಳಿಯದು. ನನಗೆ ಇಚ್ಚೆ ಬಂದಂತೆ ನಾನೂ ಅರ್ಚನೆಮಾಡಿದೆ. ಇನ್ನು ನನ್ನ ಕೈಲಾಗದು." ಎಂದಳು.

"ಅಲ್ಲಮನೆಂಬ ನಿನ್ನ ಮದ್ದ ಳೆಯವನೇ ಅಲ್ಲಮಪ್ರಭುವಾಗಿರುವುದು ಸಾಧ್ಯ, ಮಾಯೆ. ನೀನು ನಿನ್ನ ಯೌವನದ ಕೊಬ್ಬಿನಲ್ಲಿ ಈ ಮದದಿಂದ ಅವನನ್ನು ಕಾಮಿಸಿದರೆ, ಅವನೇ ಈ ವಿಕಾರದ ವೇಷದಲ್ಲಿ ಬಂದಿರಬೇಕು!" ಎಂದಳು ವಿಮಲೆ.

"ಬಿಡು, ಬಿಡೆ. ನನಗೇನು ಗೊತ್ತಿಲ್ಲವೆ? ನಾನಷ್ಟು ಮಂದ ಮತಿಯೆ? 'ಅಲ್ಲಮಪ್ರಭುವೇ ಪ್ರತ್ಯಕ್ಷ ಪರಬ್ರಹ್ಮ!' ಎಂದು ಹೇಳುವರಲ್ಲವೇ! ಇವನಂತೂ

ಅವನಲ್ಲ. ಇವನು ಬರಿಯ ಮದ್ದಳೆಯ ಅಲ್ಲಮ. ಬಿಡು ನೀನು ಹೇಳುವ ಮಾತು ಸರಿಯಲ್ಲ." ಎಂದು ಮಾಯೆ ವಿಮಲೆಯ ಮಾತನ್ನು ಒದರಿದಳು.

"ಅಯ್ಯೋ ಹುಚ್ಚಿ! ಅಲ್ಲಮಪ್ರಭು ಎಲ್ಲರಿಗೂ ಸಾಕಾರವಾಗಿ ಇರುವನು. ಸಾಧಕರ ನಿರ್ಮಲವಾದ ಮತಿಗೆ ಮಾತ್ರ ನಿರ್ಗುಣರೂಪನಾಗಿರುವನು. ನಿನಗೆ ಬುದ್ಧಿ ಸಾಲದೆಂಬುದನ್ನು ಈ ಮಾತುಗಳಿಂದ ನೀನು ವ್ಯಕ್ತಪಡಿಸುತ್ತಿದ್ದೀಯೆ. ಈ ತಾಮಸವನ್ನು ಬಿಟ್ಟು, ಸಾತ್ತ್ವಿಕದ ಬುದ್ಧಿಯಿಂದ ನೋಡು."

ಹೀಗೆಂದು ವಿಮಲೆ ಎಷ್ಟೇ ಬೋಧಿಸಿದರೂ, "ಅಯ್ಯೋ, ನನಗೇನು ತಿಳಿಯದೆ? ಬೇಕಾದರೆ ಆ ಮದ್ದಳೆಯನನ್ನೇ ತೋರಿಸುತ್ತೇನೆ. ಅವನ ನಿಜವನ್ನು ನೀನು ತಿಳಿಯುವುದಾದರೆ, ತಿಳಿ. ಸುಮ್ಮನೆ ಚರ್ಚೆಮಾಡಿ ಏನು ಪ್ರಯೋಜನ? ಅವನೇ ನಿಜವಾದ ಅಲ್ಲಮನಹುದಾದರೆ, ನಾನು ನೋಡಿಕೊಳ್ಳುತ್ತೇನೆ!" ಎಂದು ವಿಮಲೆಯನ್ನು ಕರೆದುಕೊಂಡು, ಎಂದಿನಂತೆ ಮಧುಕೇಶ್ವರನ ದೇವಾಲಯಕ್ಕೆ ಬಂದು, ಮಾಯೆ ನಾಟ್ಯರಂಗದಲ್ಲಿ ವಿರಾಜಿಸಿ ನಿಂತಳು.

"ಮಾಯೆ ಈ ಜಗತ್ತನ್ನೆಲ್ಲಾ ಆಡಿಸುತ್ತಾಳೆ. ಅಂಥ ಮಾಯೆಯ ಮೂರ್ತಿಯಾದ ಈ ಮಾಯಾಂಗನೆಯನ್ನು ನಾನು ಕಣ್ಣೆದುರಿಗೆ ಆಡಿಸುತ್ತೇನೆ, ನೋಡಿ!" ಎಂಬ ಹಾಗೆ ಅಲ್ಲಮನು ಮದ್ದಳೆಯನ್ನು ಬಾರಿಸಿದನು. ಅದಕ್ಕೆ ಹೊಂದಿಕೊಂಡು ಮಾಯೆ ನರ್ತನಮಾಡಿದಳು. ಕೋಮಲವಾದ ಅಚ್ಚಬಿಳಿಯ ಚಂದ್ರಕಾಂತಶಿಲೆಯ ಹತ್ತಿರ ಇರುವ ಬಳ್ಳಿ ಯೊಂದಕ್ಕೆ ಬೆಂಕಿ ಹತ್ತಿದರೆ, ಆ ಬೆಂಕಿ ಆ ಕಲ್ಲಿಗೇ ಹತ್ತಿತೋ ಎಂಬಂತೆ ಕಾಣುವುದಿಲ್ಲವೇ—ಹಾಗೆ, ಮಾಯೆಯ ಕಾಮದ ಜ್ವಾಲೆ ಅಲ್ಲಮನಲ್ಲಿ ಅವನಿಗೆ ಅಂಟದೆ ಪ್ರತಿಬಿಂಬಿಸಿ, ಅವನೇ ಕಾಮಿಯೆಂಬಂತೆ ಕಾಣಿಸುತ್ತಿತ್ತು.

ಆಗ ಮಾಯೆ, ತಾನು ನರ್ತನಮಾಡುತ್ತಿದ್ದ ಹಾಗೆಯೇ, ತನ್ನ ಅಭಿನಯದಿಂದ ಅಲ್ಲಮನನ್ನು ವಿಮಲೆಗೆ ತೋರಿದಳು. "ಇವನೇ ದಿಟದ ಅಲ್ಲಮನೊ? ಅಥವಾ

ಮದ್ದಳೆಯ ಅಲ್ಲಮನೊ? ನೋಡು” ಎಂದು ಅವನನ್ನು ತನ್ನ ಕಡೆಗಣ್ಣಿನಿಂದ ವಿಮಲೆಗೆ ತೋರಿದಳು. ವಿಮಲೆ ಮದ್ದಳೆಯವನಾಗಿ ತೋರುವಾತನನ್ನು ರೆಪ್ಪೆಯಿಕ್ಕದ ಕಣ್ಣುಗಳಿಂದ ದೃಷ್ಟಿಸಿದಳು. “ಈತನೇ ನಿಜವಾದ ಅಲ್ಲಮ!” ಎಂದು ಮಾಯೆಗೆ ಕಣ್ಣಿನ ಮೂಲಕ ಮಾತನಾಡಿ, ತನ್ನ ಮನಸ್ಸನ್ನು ಸೂಚಿಸಿದಳು.

ಆಗ ಮಾಯೆಗೆ ಮೊದಲಿನ ಕಾಮ ಕಡಮೆಯಾಯಿತು, ತನ್ನ ಪ್ರತಿಜ್ಞೆ ಜ್ಞಾಪಕವಾಯಿತು, ಅದನ್ನು ನಡಸಲಿಲ್ಲವಲ್ಲಾ ಎಂದು ನಾಚಿಕೆ ಹೆಚ್ಚಿತು, ನರ್ತನದ ಆಸೆ ಹೋಯಿತು, ಅಲ್ಲಮನ ಶಕ್ತಿ ಸಾಮರ್ಥ್ಯಗಳನ್ನು ತಿಳಿಯಬೇಕೆಂಬ ಆಸೆ ಹೆಚ್ಚಿತು. ’ಇವನನ್ನು ವಶಪಡಿಸಿಕೊಂಡೇತೀರುತ್ತೇನೆ’ ಎಂಬ ಮದದ ಹಠದಿಂದ ಮಾಯೆ ಮತ್ತೆ ಕುಣಿಯತೊಡಗಿದಳು. ಮುತ್ತಿನ ಓಲೆಯ ಬೆಳಕನ್ನು ಸುತ್ತಲೂ ಪಸರಿಸುತ್ತ, ಮೈಯನ್ನೂ ಮನಸ್ಸನ್ನೂ ಅಲ್ಲಮನ ಕಡೆಗೆ ಮತ್ತೆ ಮತ್ತೆ ಹರಿಸಿದಳು.

ಆಗ, “ಛೆ! ಸಾತ್ತ್ವಿಕವಾದ ಭಕ್ತಿಯಿಲ್ಲದ ಇಂಥ ನೀಚರಿಗೆ ನಾವು ನಮ್ಮ ಸ್ವರೂಪವನ್ನು ತೋರಿಸುವುದು ಅನುಚಿತ! ಇನ್ನು ಈ ನಟ್ಟುವಿಗತನ ಸಾಕು!” ಎನ್ನುತ್ತ, ಇದ್ದಕ್ಕಿದ್ದಂತೆ ತನ್ನ ಮದ್ದಳೆಯನ್ನು ಎತ್ತಿ ಒಡೆದುಹಾಕಿ, ನಗುನಗುತ್ತಾ ಅಲ್ಲಿಂದ ಎದ್ದು ಹೊರಟು ಹೋದನು. ನಾಟ್ಯದ ನಡುವೆ ಅವನು ಹೇಳದೆ ಕೇಳದೆ ಏಕೆ ಹಾಗೆ ಮಾಡಿ ಹೋದನೆಂದು ಅರ್ಥವಾಗದೆ, ಎಲ್ಲರೂ ಬೆರಗಾದರು.

“ಏಳು, ಮಾಯೆ. ಸುಮ್ಮನೆ ಹಂಬಲಿಸಿ ಏನು ಫಲ? ಅಲ್ಲಮನನ್ನು ಹುಡುಕಿಕೊಂಡು ಹೋಗೋಣ, ಬಾ?” ಎಂದು ವಿಮಲೆ ಮಾಯೆಯನ್ನು ಸಮಾಧಾನಮಾಡಿದಳು. ಮಾಯೆ ಚೇತರಿಸಿಕೊಂಡು, ಅಲ್ಲಮನನ್ನು ಆದಷ್ಟು ಬೇಗ ಕಾಣಬೇಕೆಂಬ ಆತುರದಿಂದ, ಕಾಡು ನಾಡು ಎನ್ನದೆ, ಅರಸಿಕೊಂಡು ಹೊರಟಳು. ಬಿಸಿಲು, ಗಾಳಿ, ದೂಳು, ಮಳೆ, ಕಾಡುಕಿಚ್ಚು—ಒಂದನ್ನೂ ಲೆಕ್ಕಿಸದೆ, ಹಸಿವು ದಾಹ ಆಯಾಸಗಳಿಂದ ಬಳಲುತ್ತ ಅಲ್ಲಮನನ್ನು ಹುಡುಕಿ ತಿರುಗಿದಳು.

ಮಾಯೆ ಎಲ್ಲೆಲ್ಲಿ ಹೋದರೆ ಅಲ್ಲೆಲ್ಲಾ, ಜಪ ತಪ ಮಾಡುತ್ತಿದ್ದವರು, ಹುಲಿಯನ್ನು ಕಂಡ ಹುಲ್ಲೆಗಳಂತೆ ದಿಕ್ಕಾಪಾಲಾಗಿ ಚೆದರಿ ಓಡಿದರು. ಬಿಟ್ಟ ಜಡೆಯನ್ನು ಕಟ್ಟಿಕೊಂಡು, ಹಾಸಿದ ಕೃಷ್ಣಾಜಿನವನ್ನು ಸುತ್ತಿಕೊಂಡ, ಯೋಗದಂಡ ಯೋಗಪಟ್ಟಿಕೆಗಳನ್ನು ಜೋಡಿಸಿಕೊಂಡು ಕಂಬಿ ಕಿತ್ತರು.

ಅಲ್ಲಮಪ್ರಭು ಆ ತಪೋಧನರ ಅಂಜಿಕೆಯನ್ನು ನೋಡಿದರು, ತನ್ನನ್ನು ಅರಸಿಬಂದ ತರುಣಿಯರ ಬಳಲಿಕೆಯನ್ನು ಗಮನಿಸಿದರು. 'ಇದನ್ನು ನಾನೇ ಪರಿಹರಿಸಬೇಕು,' ಎಂದು ಆ ಕ್ಷಣ ಕಾಣಿಸಿಕೊಂಡರು, ತಾವೂ ಒಬ್ಬ ತಪಸ್ವಿಯ ಹಾಗೇ ಬಂದು, ಆ ತಾಪಸರುಗಳನ್ನು ನಿಲ್ಲಿಸಿ, ಅವರಿಗೆ ಅಭಯ ಹೇಳಿದರು. ಅನಂತರ, ಮಾಯೆಯನ್ನು ಮುರಿದು ಓಡಿಸುವೆನೆಂದು, ತಮ್ಮ ಮೊದಲಿನ ರೂಪದಿಂದ ಅವಳಿಗೆ ಕಾಣಿಸಿಕೊಂಡರು.

ಪ್ರಭುವಿನ ಶ್ರೀಪಾದವನ್ನು ಕಂಡೊಡನೆಯೇ ಮಾಯೆಯ ಸಖಿಯರಿಗೆ ದಾಹ ಆರಿತು, ಹಸಿವು ಹೋಯಿತು, ಬಳಲಿಕೆ ಇಂಗಿತು. ಕಂಪಿಸುತ್ತ, ಮುಗ್ಗರಿಸುತ್ತ, ಪ್ರಭುವಿನ ಕಾಲಬಳಿ ಕೆಡೆದರು. "ಬಹಳ ಒಳ್ಳೆಯ ಕೆಲಸ ಮಾಡಿದೆ, ಅಯ್ಯ! ಇಷ್ಟು ದಿನ ನಮ್ಮ ಒಡತಿಯನ್ನು ಒಲಿಸಿಕೊಂಡಿದ್ದು ಕಡೆಗೆ ಹೀಗೆ ಮೋಸಮಾಡಿ ಓಡಿಹೋಗಬಹುದೆ!" ಎಂದು ದೂರಿದರು.

ಪ್ರಭು ಹೇಳಿದರು: "ಮೊದಲು ನಮ್ಮನ್ನು ಬಯಸಹೇಳಿದವರಾರು? ಅನಂತರ, ಕಂಡು, ಕರಸಹೇಳಿದವರಾರು? ಕರಸಿದ ಬಳಿಕ, ಉದಾಸೀನಮಾಡಿ ಕಳಿಸಹೇಳಿದವರಾರು? ಹೀಗೆ ಕ್ಷಣಕ್ಕೊಂದು ಬಗೆಯಾಗಿ ನಡೆದು ತಾನು ಮಾಡಿದ್ದು ತನಗೇ ಮುಳ್ಳಾದರೆ, ನಮ್ಮನ್ನು ದೂರಿ ಏನು ಫಲ?"

ಆ ಮಾತು ಕೇಳಿ, ಮಾಯೆಗೆ ತುಂಬ ರೇಗಿತು. "ಎಲಾ ಧೂರ್ತ! ನೀನೇ ಗತಿಯೆಂದು ನಿನ್ನನ್ನು ನಂಬಿದ್ದಕ್ಕೆ ತುಂಬ ಒಳ್ಳೆಯದಾಯಿತು! ಇನ್ನು ಆಡಿ ಏನು ಫಲ?

ಇಷ್ಟೆಲ್ಲಾ ಸಟೆ, ಕುಟಿಲ, ಕುಮಂತ್ರ, ಚಪಲ, ಚಮತ್ಕಾರಗಳನ್ನು ಬಲ್ಲವನೆಂದು ನಾನು ತಿಳಿದಿರಲಿಲ್ಲ!" ಎಂದಳು.

ಪ್ರಭು ಎಂದರು: "ಈ ಕುಟಿಲ, ಕುತ್ಸಿಕ, ಧೂರ್ತ, ದುರ್ಜನ, ಮೋಸ, ಕಪಟ, ಕಳವಳ, ಸಟೆ ಮುಂತಾದ ವಿಕಾರಗಳೆಲ್ಲವೂ ಮಾಯೆಯವೋ ಅಥವಾ ಅಲ್ಲಮನವೋ ಎಂಬುದನ್ನು ತಿಳಿಯಬೇಕಾದರೆ ಬ್ರಹ್ಮನನ್ನು ಕೇಳು, ಹರಿಯನ್ನು ಕೇಳು, ದೇವತೆಗಳನ್ನು ಕೇಳು, ಮುನಿಗಳನ್ನೂ ಸಿದ್ಧ ಸಾಧಕರುಗಳನ್ನೂ ಕೇಳು."

"ನೀನು ಹೇಳಿದ ಅವರೆಲ್ಲರೂ ನಿನಗೆ ಅಧೀನರಾದವರೆಂದು ನಾನು ಬಲ್ಲೆ. ಅವರನ್ನು ನಾನೇನೂ ಅರಿಯದವಳಲ್ಲ, ಹರಿಯ ಎದೆಯನ್ನು ಮೆಟ್ಟಿದ್ದೇನೆ, ಶಂಕರನ ಅರ್ಧಾಂಗವನ್ನು ಆಳಿದ್ದೇನೆ, ಬ್ರಹ್ಮನ ಬಾಯನ್ನು ಮುದ್ರಿಸಿದ್ದೇನೆ, ಸುರನರೋರಗರೆಂಬ ಹುಚ್ಚರ ಗುಂಪನ್ನು ನನ್ನ ದಾಸಿಯರ ಕಾಲಿಗೆ ಬೀಳಿಸಿದ್ದೇನೆ. ಇನ್ನು, ನಿನ್ನ ಸಿದ್ಧಸಾಧಕ ಮುಂತಾದವರ ಮಾತು ಏಕೆ? ಎಂದಮೇಲೆ, ನಿನ್ನನ್ನು ಸೋಲಿಸಿ ಸಿಕ್ಕಿಸುವುದು ನನಗೆ ಏನು ಮಹಾ ದೊಡ್ಡದೆ!" ಎಂದು ಮಾಯೆ ಮತ್ತೆ ತನ್ನ ಪ್ರತಾಪವನ್ನು ಕೊಚ್ಚಿಕೊಳ್ಳಕೊಡಗಿದಳು.

ಪ್ರಭುದೇವರು ಅವಳು ಹೇಳಿದ್ದನ್ನೆಲ್ಲಾ ಕೇಳಿದರು. "ಹರಿಹರ ಬ್ರಹ್ಮಾದಿಗಳನ್ನು ಸ್ವಾಧೀನಮಾಡಿಕೊಂಡು, ಅವರನ್ನು ಆಳುತ್ತೇನೆ ಎಂದೆಯಲ್ಲಾ; ಇಂಥ ನಿನ್ನನ್ನು ಹೀಗೆಲ್ಲಾ ಆಡಿಸುವವರು ಯಾರು, ಎಂಬುದನ್ನು ಪರೀಕ್ಷಿಸದೆ ಗರ್ವದಿಂದ ಹೀಗೆ ಹೇಳಬಹುದೆ, ಮಾಯೆ?" ಎಂದರು.

ಮಾಯೆ ಮತ್ತೆ ಮೆತ್ತಗಾಗಿ, "ಯಾರನ್ನು ಯಾರು ಆಡಿಸುವರು ಎಂಬುದು ಕಟ್ಟಿಕೊಂಡು ಏನಾಗಬೇಕು? ನಮಗೆ ನಮ್ಮ ಮನೋರಥ ದೊರೆತರೆ ಸಾಕು. ದಯೆಮಾಡಿ ಕೃಪೆಮಾಡು." ಎಂದು ಬೇಡಿದಳು. "ನನ್ನ ಭಾಷೆ ಸಲ್ಲದೆ ಹೋಯಿತು. ನನ್ನ ಕೀರ್ತಿ ಬತ್ತಿಹೋಗುತ್ತಿದೆ. ಕೈಲಾಸದವರು ಈ ಕತೆ ಕೇಳಿ ನಗುವ ಹಾಗಾಯಿತೇ!

ಆತುರಪಟ್ಟು ಬಂದು, ಇಂಥ ಅವಸ್ಥೆಗೆ ಗುರಿಯಾದೆನು! ಮೊದಲೇ ಬೆಂದಿರುವ ಹುಣ್ಣಿನಲ್ಲಿ ಮತ್ತೆ ಕಂಬಿಯನ್ನು ತಿವಿದುಗೀರಬೇಡ!" ಎಂದು ಬೇಡಿದಳು.

"ಹೆಣ್ಣೆ! ತಾನು ತಂದ ಚಿನ್ನ ಶುದ್ಧವಾಗಿಲ್ಲದೆ ಹೋದರೆ ಅಕ್ಕ ಸಾಲೆಯನ್ನು ಬೈದು ಫಲವೇನು? ನೀನು ಬುದ್ಧಿಯಿಲ್ಲದೆ, ಹರನನ್ನು ಅರ್ಚಿಸುವ ರೀತಿಗಳ ವ್ಯತ್ಯಾಸವನ್ನು ಅರಿಯದೆ, ಸಟೆಯ ಭಕ್ತಿಯನ್ನು ಮಾಡಿ, ಫಲವನ್ನು ಬಯಸಿದರೆ, ಏನು ಬಂತು, ಮಾಯೆ?" ಎಂದು ಪ್ರಭು ಖಂಡಿತವನ್ನು ನುಡಿದರು.

ಮಾಯೆಗೆ ಈ ಪ್ರಕಾರವಾಗಿ ಆದ ಮುಖಭಂಗವನ್ನು ಕಂಡು, ಸಖಿಯರು ಏನೂ ಮಾತನಾಡದೆ ಇರಲು, ವಿಮಲೆ ತಾನೇ ವಿನಯದಿಂದ ಹೀಗೆ ವಿಜ್ಞಾಪನೆ ಮಾಡಿದಳು: "ಶರಣಜನರ ರಕ್ಷಾ ಮಣಿಯೆ! ಕಿಂಕರರೆಂಬ ಚಕೋರಗಳಿಗೆ ಚಂದ್ರನಾದವನೆ! ದಯಾಸಮುದ್ರನೆ! ನೀನು ಈ ಸ್ತ್ರೀಯನ್ನು ಒರೆಹಚ್ಚಿ ನೋಡಿದರೆ, ಏನು ತಿರುಳುಂಟು? ನೀನು ಕರುಣೆಯಿಂದ ಇವಳ ಪ್ರಾಣವನ್ನು ಉಳಿಸಬೇಕು." ಎಂದಳು.

"ಬಾಲೆ! ನೀರಿಗೆ ಹೆಪ್ಪು ಹಾಕಿದರೆ, ಅದು ಹಾಲಿನಂತೆ ಹೆತ್ತುಕೊಳ್ಳುತ್ತದೆಯೆ? ಅದರಂತೆಯೇ ಕ್ಷುದ್ರ ಬುದ್ಧಿಯವರಿಗೆ ಏನು ಹೇಳಿದರೂ ಫಲವಿಲ್ಲ."

"ನಿಜ ಪ್ರಭುವೆ. ಆದರೆ, ಹೆಣ್ಣು ಏನೇ ಕೀಳು ಕಬ್ಬಿಣವಾದರೂ ಆಗಲಿ; ಸ್ಪರ್ಶಶಿಲೆಯಂಥ ಗಂಡು ಒದ್ದರೂ ಸರಿಯೆ, ಪ್ರೀತಿಯಿಂದ ಮುಟ್ಟಿದರೂ ಸರಿಯೆ, ಆ ಕಬ್ಬಿಣ ಚಿನ್ನವಾಗುವುದಿಲ್ಲವೆ? ಹಾಗೆಯೇ ನೀನು ಒಲ್ಲದೆ ಈ ಮಾಯೆಯನ್ನು ಹೊಂದಿದರೂ ಇವಳು ಬದುಕಿಕೊಳ್ಳುವಳು."

"ನಿನ್ನ ಮಾತು ಸತ್ಯ, ಹೆಣ್ಣೆ. ಕಬ್ಬಿಣವಾದರೆ, ಸ್ಪರ್ಶ ಮುಟ್ಟಿ ಚಿನ್ನವಾಗಬಹುದು. ಆದರೆ, ಅದು ಕಬ್ಬಿಣವಲ್ಲದೆ, ಹಳೆಯ ಹೆಂಚಾದರೆ? ಚಂಚಲವಾದ ಈ ಮಾಯಾಂಗನೆಯ ಮನಸ್ಸು ಏನು ಮಾಡಿದರೂ ನಿಶ್ಚಲವಾಗದು!"

“ಆದರೂ, ಪ್ರಭುವೆ, ಏನೇ ತಪ್ಪಿದ್ದರೂ, ಕ್ಷಮಿಸಿ ಕಾಪಾಡಬೇಕು. ದೇವಿಯರ ಪ್ರತಿಜ್ಞೆಯನ್ನು ಪಾಲಿಸಲು ಬಂದ ಇವಳಿಗೆ ಜಯವನ್ನು ಕರುಣಿಸಬೇಕು. ಇದರಿಂದ ನಿನುಗೇನು ಕುಂದು?”

“ವಿಮಲೆ! ಒಂದು ರೀತಿಯ ಬೀಜವನ್ನು ಬಿತ್ತಿ, ಇನ್ನೊಂದು ರೀತಿಯ ಫಲವನ್ನು ಬಯಸಿದರೆ, ಬರುವುದೆ? ಈ ಮಾಯೆ ಮರುಳಾಗಿ, ತಾಮಸದ ಮದದಿಂದ, ಚಂಚಲವಾದ ಭಕ್ತಿಯನ್ನು ಮಾಡಿದರೆ, ಸತ್ಫಲ ಎಲ್ಲಿಂದ ಬಂದೀತು?”

ಕಡೆಗೆ ಹೇಳಿದಳು ವಿಮಲೆ: “ಹಾಗಾದರೆ, ಈಗಂತೂ ನಿನ್ನ ಪಾದಗಳಿಗೆ ಬಂದು ಶರಣಾಗಿದ್ದೇವೆ. ಇನ್ನು ನಿನ್ನ ಮನಸ್ಸಿಗೆ ಬಂದ ಹಾಗೆ ನೀನು ನಮ್ಮನ್ನು ಕಾಪಾಡಿಕೊ!”

ಪ್ರಭು ಅವಳ ಮಾತಿಗೆ ಪ್ರೀತರಾದರು, “ವಿಮಲೆ, ವಿಮಲೆ ಎಂಬ ಹೆಸರನ್ನು ಬ್ರಹ್ಮನು ನಿನಗೆ ಇಟ್ಟಿದ್ದು ಬಹು ಯುಕ್ತ.” ಎಂದರು. ಮಾಯೆಯ ಕಡೆ ತಿರುಗಿ, “ಮತಿಕೆಟ್ಟ ಮಾಯೆ! ಕಾಮವೆತ್ತ, ಪರಮತತ್ತ್ವದ ಸೀಮೆಯೆತ್ತ? ಕತ್ತಲೆಯೆತ್ತ, ಕತ್ತಲನ್ನು ಕಳೆಯುವ ಸೂರ್ಯನೆತ್ತ? ಜ್ಞಾನವೆತ್ತ, ಅಜ್ಞಾನವೆತ್ತ? ಭ್ರಮೆಯ ಮಾತು ಸಾಕು. ನೀನೆತ್ತ, ಶಿವತತ್ತ್ವವೆತ್ತ? ಕ್ಷೇಮವಾಗಿ, ಬಂದ ದಾರಿ ಹಿಡಿದು ಹೋಗು!” ಎಂದು ಮೃದುವಾಗಿ ಹೇಳಿದರು. “ಸಮುದ್ರದ ನೀರುಗಳೆಲ್ಲಾ ಅಮೃತದ ಮಡುಗಳಾದರೂ ಆಗಬಹುದು; ಮೇರುಪರ್ವತ ಕುಡಿಬಿಟ್ಟು ಎಲ್ಲ ಕಡೆಗೆ ಹಬ್ಬಿದರೂ ಹಬ್ಬಬಹುದು; ಭೂಮಿಯ ವೃಕ್ಷಗಳೆಲ್ಲ ಕಲ್ಪವೃಕ್ಷಗಳಾದರೂ ಆಗಬಹುದು; ಇವೆಲ್ಲಾ ಆದರೂ ಆಗಬಹುದು— ಆದರೆ, ಮಾಯೆಗೆ ಮಾತ್ರ ಯಾವ ಕಾಲಕ್ಕೂ ಪರತತ್ತ್ವದ ಜ್ಞಾನವಾಗದು!” ಎಂದು ಖಂಡಿತವಾಗಿ ಹೇಳಿ, ಪ್ರಭುದೇವರು ಅಂತರ್ಧಾನವಾದರು.

ಇತ್ತ, ’ಮಗಳು ಮದ್ದಳೆಯವನ ಹಿಂದೆ ಓಡಿಹೋದಳು’ ಎಂಬುದನ್ನು ಮೋಹಿನೀದೇವಿ ಕೇಳಿ, ಮಗಳನ್ನು ತಾನು ಬೆಂಬತ್ತಿದಳು. ಮಮಕಾರ ತಾನೂ ಸಂಗಡ ಬಂದು ಮಗಳನ್ನು ಕಂಡು, “ಏನು ನಗೆಗೇಡು ಮಾಡಿದೆಯೆ, ಮಗಳೆ?” ಎಂದು

ಮರುಗಿದನು. "ಬೇಡ, ಬೇಡ ಎಂದು ಮೊದಲಿಂದಲೂ ನಾನು ಹೇಳುತ್ತಿರಲಿಲ್ಲವೆ? ಈಗ ನೋಡು ಕೊನೆಗೆ ಯಾವ ಗತಿ ಬಂತು!" ಎಂದು ಮೋಹಿನೀದೇವಿ ಸಿಡಿಮಿಡಿಗುಟ್ಟಿದಳು.

ವಿಮಲೆ ಅವರಿಗೆ ಯಥಾರ್ಥವನ್ನು ತಿಳಿಸಿದಳು: "ಪಾರ್ವತಿಯ ನಿಯಮವನ್ನು ಕೈಕೊಂಡು, ಅಲ್ಲಮನನ್ನು ಸಾಧಿಸಬೇಕೆಂದು ಬಂದವಳು, ಈ ಮಾಯೆ. ಈಗ, ಅಲ್ಲಮನು ಸಿಕ್ಕದೆಹೋದದ್ದರಿಂದ, ಅವನನ್ನು ಹುಡುಕಿಕೊಂಡು ಕಾಡಿಗೆ ಬಂದಳು. ಇದಕ್ಕಾಗಿ ನೀವು ಚಿಂತಿಸುವುದು ಬೇಡ."

"ಯಾವುದೋ ಕಾರಣಕ್ಕೋಸ್ಕರ ಇಲ್ಲಿಗೆ ಬಂದು, ನಾನು ನಿಮ್ಮ ಮಗಳಾದೆನು. ಬಂದ ಕಾರ್ಯ ಕೈಗೂಡದೆಹೋಯಿತು. ಇನ್ನು ನೀವು ನನಗಾಗಿ ಎದುರುನೋಡುವುದು ಬೇಡ." ಎಂದು ಮಾಯಾದೇವಿ ತನ್ನ ತಾಯಿತಂದೆಗೆ ಹೇಳಿಕೊಂಡು, ವಿಮಲೆಯ ಜೊತೆಯಲ್ಲಿ ಬೆಳ್ಳಿಯ ಬೆಟ್ಟಕ್ಕೆ ಭೋರನೆ ಹೋದಳು.

## ಗುರು ಗುಹೇಶ್ವರ ಲಿಂಗ

ಆರಿಹೋಗಿದ್ದ ದೀಪ ಇದ್ದಕ್ಕಿದ್ದಂತೆ ಪಕ್ಕನೆ ಹತ್ತಿಕೊಂಡಿತು. ಹಜಾರದಲ್ಲೆಲ್ಲ ಬೆಳ್ಳಂಬೆಳಗಾಯಿತು.

"ಹೋಗಿದ್ದ ಕಣ್ಣು ಬಂದ ಹಾಗಾಯಿತು!" ಎಂದರು, ಶಿವೂತಾಯಿ.

"ಕವಿದುಕೊಂಡಿದ್ದ ಮಾಯೆ ಕಳೆದುಹೋದ ಹಾಗಾಯಿತು!" ಎಂದ ಶಿವು.

"ಹುಂ. ಮುಂದೆ ಏನು ಮಾಯೆಯ ಕಥೆ?"

ಮುಂದೆ ಮಾಯೆ ವಿಮಲೆಯ ಜೊತೆಯಲ್ಲಿ ಪಾರ್ವತಿಯ ಸನ್ನಿಧಿಯನ್ನು ಸೇರಿದಳು. ತನಗೆ ಅಲ್ಲಮನು ಸಿಕ್ಕದೆ ಹೋದುದನ್ನು ಒಪ್ಪಿಕೊಂಡಳು. ಅವಳು ಹೇಳಿದ್ದನ್ನೆಲ್ಲಾ ಕೇಳಿ, ಉಮೆ ಚಿಂತೆಯಿಂದ ಭ್ರಮಿಸಿಹೋದಳು.

ಪಾರ್ವತಿಯ ಪರಿಸ್ಥಿತಿಯನ್ನು ಕಂಡು, ಪರಮೇಶ್ವರನು ಕರುಣೆಯಿಂದ ಅವಳಿಗೆ ಸಮಾಧಾನ ಹೇಳಿದನು: "ಗಿರಿಜೆ! ಸಿಡಿಲೆಂಬ ಹಕ್ಕಿಯ ರೆಕ್ಕೆಗಳನ್ನು ಕಿತ್ತು, ಅದರ ಮಾಂಸವನ್ನು ಅಡಿಗೆಮಾಡುವ ಕಲಿಗಳು ಯಾರುಂಟು? ಕೃಷ್ಣಸರ್ಪನ ನಿದ್ರೆಯನ್ನು ಕೆಣಕುವ ಗಾರುಡಿಗರು ಯಾರುಂಟು? ಅದರಂತೆ ನನ್ನ ತತ್ತ್ವದ ತೊಡಕನ್ನು ತಿಳಿಯುವುದು ಕೂಡ ಸುಲಭವಲ್ಲ!"

ಪಾರ್ವತಿ ಈ ಸಲ ಮದದಿಂದ ಮಾರುತ್ತರ ಕೊಡಲಿಲ್ಲ. ವಿನಯದಿಂದ ವಿಜ್ಞಾಪಿಸಿಕೊಂಡಳು: "ಎಲೆ ಸದಾಶಿವ, ನಿನ್ನೊಡನೆ ಚಲ ಮಾಡಲು ನಾನು ಅಂಜುವೆನು. ನಿನ್ನ ಸಾಮರ್ಥ್ಯಕ್ಕೆ ನಾನು ಎದುರಲ್ಲ. ನಿನ್ನ ಕರುಣನಿದ್ದ ಹಾಗೆ ನೀನು ನಿನ್ನ ನಿಜಸ್ವರೂಪವನ್ನು ನನಗೆ ತಿಳಿಹಿ ಕಾಪಾಡಬೇಕು." ಎಂದಳು.

ಶಿವನು ಆ ಮಾತಿಗೆ ಮೆಚ್ಚಿಕೊಂಡು, "ಮೊದಲೇ ನನ್ನ ಮಾತು ಕೇಳದೆ, ಸುಮ್ಮನೆ ತಾಮಸಗುಣದ ಮಾಯೆಯನ್ನು ಏಕೆ ಕಳುಹಿದೆ? ಈಗಲಾದರೂ ನಿನ್ನ ಸಾತ್ತ್ವಿಕದ ಸಂಪನ್ನಕಳೆಯನ್ನು ಭೂಮಿಗೆ ಕಳಿಹು. ಅಲ್ಲಿ ಕನ್ಯೆಯಾಗಿ ಜನಿಸಿ, ನಿಷ್ಕಾಮ ಭಕ್ತಿಯಿಂದ ಇರಲಿ. ಆಕೆಗೆ ಅಲ್ಲಮಪ್ರಭು ತಾನೇ ತನ್ನ ನಿಜವನ್ನು ತೋರುವನು, ಇದಕ್ಕೆ ಸಂಶಯ ಬೇಡ." ಎಂದನು.

ಆಗ ಪಾರ್ವತಿ, ತಾನು ಸಲುಗೆಯಿಂದ ಮಾಡಿಕೊಂಡ ಬಿನ್ನಹವೆಂಬ ಬೀಜಕ್ಕೆ ಶಿವನ ಕರುಣೆಯೆಂಬ ಹದವಾದ ಮಳೆ ದೊರೆಕೊಂಡಿತೆಂದು ಹರ್ಷದಿಂದ, "ಶಿವನೆ, ನಿನ್ನ ಕರುಣೆಯಿಂದ ನಾನು ಬದುಕಿದೆ!" ಎಂದಳು.

ಅಲ್ಲಿಯೇ ಇದ್ದ ವೃಷಭರಾಜನು ಆ ಮಾತು ಕೇಳಿದನು. "ಇದೇನು ಆಡಿದಿರಿ, ತಾಯೆ? ನೀವು ಎಂದೂ ಅಚಲಸುಖಿಗಳು. ಇದುವರೆಗೆ ಇಲ್ಲದ ಶಿವನ ಕರುಣೆ ಈಗೇನು ದೊರೆಕೊಂಡಿತು ನಿಮಗೆ? ತಾವು ಹೂಳಿಟ್ಟ ನಿಧಿ ತಮಗೆ ಆಗುವುದೇನು ಆಶ್ಚರ್ಯ!" ಎಂದನು.

ಅದನ್ನು ಕೇಳಿ, ಪರಶಿವನು "ವೃಷಭರಾಜ! ನಿನ್ನ ನಾಲಗೆ ಶುಭವನ್ನು ಸೂಚಿಸುತ್ತಿದೆ. ನೀನೂ ಹೋಗು. ಹೋಗಿ, ಅಲ್ಲಮನ ಸಮ್ಮೇಳನದಲ್ಲಿ ಸುಖಿಯಾಗು, ನೀನು ಧರೆಯಲ್ಲಿ ಮೆರೆಯದಿದ್ದರೆ, ಅಲ್ಲಮನು ಸುಲಭವಾಗಿ ಸಿಕ್ಕುವವನಲ್ಲ. ನೀನು ಭಕ್ತಿಯನ್ನು ಮಾಡಿ ತೋರಿಸು. ನಿನ್ನ ನೆಪದಲ್ಲಿ ಸರ್ವರೂ ಸ್ವಾನುಭವ ಸುಖದ ಸ್ವರೂಪವನ್ನು ಸಾಧಿಸಿಕೊಳ್ಳಲಿ," ಎಂದು ಅನುಗ್ರಹ ಮಾಡಿದನು.

ಆಗ, "ಓಹೋ! ಈ ವೃಷಭನು ಭೂಮಿಯಲ್ಲಿ ಹುಟ್ಟಿ ಅಲ್ಲಮನನ್ನು ಅರಿಯುವನೊ? ಇವನು ಮಹಾ ಅತಿಶಯದ ಭಕ್ತಿಯನ್ನು ಮೆರೆಯುವನೊ? ಬಿಡು, ಇದೆಲ್ಲ ಬರಿ ಭ್ರಮೆ!" ಎಂದು ಕೆಲವರು ಮಂದಮತಿಗಳು ಆ ಶಿವನ ಸಭೆಯಲ್ಲಿ ವೃಷಭನನ್ನು ಅಣಕವಾಡಿದರು.

ಅದಕ್ಕೆ ಶಿವನು ಅವರನ್ನು ಕುರಿತು "ನೀವು ಮರುಳರು. ವೃಷಭರಾಜನ ಯೋಗ್ಯತೆಯನ್ನು ತಿಳಿಯದೆ ಮಾತನಾಡುವಿರಾದರೆ, ಭೂಮಿಯಲ್ಲಿ ಹೋಗಿ ಹುಟ್ಟಿ, ಆತನ ಭಕ್ತಿಯ ಉನ್ನತಿಯನ್ನು ಕಂಡುಬನ್ನಿರಿ. ಕಂಡು ನಿಮ್ಮ ಮನಸ್ಸಿನ ಮದಮತ್ಸರಗಳನ್ನು ನೀಗಿರಿ." ಎಂದು ಅವರುಗಳನ್ನು ಭೂಮಿಗೆ ಅಟ್ಟಿದನು.

ಹೀಗೆ ಭೂಮಿಗೆ ಬಂದು ಹುಟ್ಟಿದವರಲ್ಲಿ ಒಬ್ಬಾತ ಸಿದ್ಧರಾಮಯ್ಯ, ಸೊನ್ನಲಾಪುರದಲ್ಲಿ ಮೊರಡಿಯ ಮುದ್ದವ್ವೆ ಎಂಬ ಶುದ್ಧ ಶಿವಭಕ್ತೆಯ ಗರ್ಭದಲ್ಲಿ ಜನಿಸಿದವನು ಈತ. ಇನ್ನೊಬ್ಬಾತ ಮಡಿವಾಳ ಮಾಚಯ್ಯ. ಇನ್ನೂ ಅನೇಕರು ಪ್ರಮಥರೂ ರುದ್ರಕನ್ನಿಕೆಯರೂ ಅಲ್ಲಿಂದ ಬಂದು ಇಲ್ಲಿ ಶಿವೈಕ್ಯರ ಉದರಗಳಲ್ಲಿ ಜನ್ಮ ತಾಳಿದರು.

ಇವರಲ್ಲೆಲ್ಲ ಅಗ್ರಣಿ ಎಂದರೆ, ಬಸವಣ್ಣನವರು. ಇವರ ಆದಿಯ ಕಥೆ ಸ್ವಲ್ಪ ಹೇಳಿ, ಮತ್ತೆ ಮಹದೇವಿಯಕ್ಕನವರ ಪ್ರಸ್ತಾಪಕ್ಕೆ ಬರುತ್ತೇನೆ, ಅಮ್ಮ ಈಗಲೂ 'ಹಾರಿಸಿದೆ' ಎಂದು ಎನ್ನಬೇಡ.

ಇಂಗಳೇಶ್ವರ ಬಾಗವಾಡಿಯಲ್ಲಿ ಮಾದರಸ, ಮಾದಾಂಬಿಕೆ ಎಂದು ದಂಪತಿಗಳು. ದಾನ ಧರ್ಮ ಪರೋಪಕಾರ ಗುರುಭಕ್ತಿ ಶಿವಭಕ್ತಿ ಇವುಗಳ ರೀತಿನೀತಿ ಬಲ್ಲವರು, ಅವರು. ಮಾನಿಷ್ಠರು, ಪುಣ್ಯಾತ್ಮರು, ಮಹಿಮಾವಂತರು. ಆಕೆ ಪತಿವ್ರತಾಶೀಲೆ, ಆತನೋ ಏಕಪತ್ನೀವ್ರತಸ್ಥ. ಇಂಥವರಿಗೆ ಅನುರೂಪರಾದ ಗುರುಶಿಷ್ಯರ ಸಂಗದಿಂದ ಸುಜ್ಞಾನ ಜನಿಯಿಸುವಂತೆ, ಸುಕುಮಾರನೊಬ್ಬನು ಜನಿಸಿದನು. ಹುಟ್ಟಿದ ಮಗು ಅಳಲಿಲ್ಲ, ಅಲುಗಲಿಲ್ಲ, ಕಣ್ಣು ಬಿಡಲಿಲ್ಲ, ತಾಯಿತಂದೆ ಅದೇಕೆಂದು ತಿಳಿಯದೆ, ತುಂಬ ವ್ಯಥೆಪಟ್ಟರು. ಆಗ ಶಿವನೇ ಒಲಿದು ಬಂದು, ಮನೆಯಲ್ಲಿ ಕುಳಿತು, ಮಗುವನ್ನು ತನ್ನ ಅಂಗೈಯಲ್ಲಿ ಎತ್ತಿಕೊಂಡನು, "ನೀನು ಪರಮನಾಗುತ್ತೀಯೆ" ಎಂದು ಹೇಳುವಂತೆ ಹಣೆಯಲ್ಲಿ ವಿಭೂತಿಯನ್ನು ಇಟ್ಟನು. "ನಾನು ಎಂದೆಂದಿಗೂ ನಿನ್ನನ್ನು ಅಗಲದೆ ಒಡನೆ ಇರುತ್ತೇನೆ." ಎಂಬುದಕ್ಕೆ ಗುರುತಾಗಿ ಮಗುವಿನ ಕೊರಳಲ್ಲಿ ದಿವ್ಯಲಿಂಗವನ್ನು ಕಟ್ಟಿದನು.

ಆ ಮಗುವಿಗೆ ಶಿವನು ತಾನೇ ಗುರುವಾದನು. ನಂಬಿಕೆ ಕೊಡುವಂತೆ ಅಂಗೈಯನ್ನು ತಲೆಯ ಮೇಲಿರಿಸಿ, ಕಿವಿಯ ಮೂಲಕ "ನಮಃ ಶಿವಾಯ" ಎಂಬ ಪಂಚಾಕ್ಷರಿಯ ಅಮೃತವನ್ನು ದೇಹಕ್ಕೆ ತುಂಬಿ, "ಬಸವ" ಎಂದು ನಾಮಕರಣಮಾಡಿ ಹೋದನು.

ಮುಂದೆ ವಿದ್ಯಾಭ್ಯಾಸವಾಯಿತು. ಮರೆತ ಮಾತನ್ನು ನೆನಸಿಕೊಟ್ಟಂತೆ, ವೇದ ಶಾಸ್ತ್ರ ಪುರಾಣ ಆಗಮ ಮೊದಲಾದುವೆಲ್ಲ, ಒಂದು ಸಲ ಕೇಳಿದ ಮಾತ್ರಕ್ಕೇ ಬಸವರಾಜನಿಗೆ ಬಂದುಹೋದುವು. ಅಲ್ಲಿಂದ ಮುಂದೆ ಉಪನಯನದ ವಯಸ್ಸಿಗಾಗಲೇ ಆತನಲ್ಲಿ ಶಿವಭಕ್ತಿಭಾವದ ಅಪರಿಮಿತವಾದ ಮಹಿಮೆ ತೋರಿಬಂತು. ಮುಂದೆ, ಅವರೇ ತಮ್ಮ ತಾಯಿತಂದೆಯನ್ನು ಬೀಳ್ಕೊಂಡು, ತಮ್ಮ ಅಕ್ಕನವರಾದ ನಾಗಾಯಿಗಳ ಜೊತೆಯಲ್ಲಿ ಕಲ್ಯಾಣಕ್ಕೆ ಬಂದರು.

ಆಗ, ಆ ಕಲ್ಯಾಣಕ್ಕೆ ದೊರೆ—ವೀರ ಬಿಜ್ಜಳ. ಒಂದು ದಿನ ಅವನ ಆಸ್ಥಾನದ ಮಧ್ಯದಲ್ಲಿ ಅಕಸ್ಮಾತ್ ಬಂದ ಒಂದಾನೊಂದು ಲಿಖಿತವನ್ನು ಬಸವಣ್ಣನವರು ತಿಳಿದು ಓದಿದರು. ಅದರಲ್ಲಿ ಇದ್ದ ಪ್ರಕಾರ, ಒಂದು ಅಪರಿಮಿತವಾದ ನಿಧಿಯನ್ನು ನೆಲದಿಂದ ತೆಗೆಸಿ ತೋರಿಸಿದರು. ದೊರೆ 'ಈತನು ಕಾರಣಪುರುಷನು' ಎಂದುಕೊಂಡು, ಅವರಿಗೆ ಮಹಾಪ್ರಧಾನ ಪದವಿಯನ್ನು ಮಾಡಿಸಿದನು.

ಅನಂತರ ಬಸವಣ್ಣನವರು ಅಲ್ಲೇ ಕಲ್ಯಾಣದಲ್ಲೆ ನಿಂತರು. ರೂಢಿ ಮೆಚ್ಚುವುದಕ್ಕೋಸ್ಕರ, ಹಲವು ಪವಾಡಗಳನ್ನು ಮೆರೆದರು. ನಿರಂತರವಾಗಿ ಲಿಂಗಕ್ಕೂ ಜಂಗಮಕ್ಕೂ ನಿಷ್ಠೆಯಿಂದ ಬೇಡಿ ಬೇಡಿದ್ದನ್ನು ಕೈಬಡಿಯದೆ ನೀಡಿದರು.

ಚಂದನದ ಮರದ ಮೇಲೆ ಬಂದ ಗಾಳಿ ಸೋಕಿದರೆ ಉಳಿದ ಮರಕ್ಕೆ ಪರಿಮಳ ಬರುವುದಿಲ್ಲವೇ ಹಾಗೆ—ಅಲ್ಲಮನನ್ನು ಅರಿತು ಬರುವುದಕ್ಕಾಗಿ ಬಸವಣ್ಣನವರು ಹುಟ್ಟಿದರೆ, ಆ ಮಹಾತ್ಮರ ಕಾಲುಗಳ ದೂಳಿನ ಕಣದ ಸಂಗದಿಂದ ಜನರು ತಮ್ಮಷ್ಟಕ್ಕೆ ತಾವೇ ಶಿವ ಭಕ್ತರಾದರು.

ಇದಿಷ್ಟೂ ಬಸವಣ್ಣನವರ ಕಥೆ, ಆಯಿತೆ. ಇನ್ನು, ಅಕ್ಕ ಮಹದೇವಿಯವರನ್ನು ಹೋಗಿ ನೋಡಿಕೊಂಡು ಬರೋಣ.

ಉಡುತಡಿ ಎಂಬುದು ಒಂದು ಪಟ್ಟಣ. ಅಲ್ಲಿ ನಿರ್ಮಲ ಎಂಬವನು ಒಬ್ಬ ಗಾಢ ಶಿವಭಕ್ತ. ಆತನ ವಲ್ಲಭೆ, ಸುಮತಿ. ಈ ನಿರ್ಮಲನಿಗೂ ಸುಮತಿಗೂ ಮಗಳಾಗಿ ಪಾರ್ವತಿಯ ಸಾತ್ತ್ವಿಕ ಕಳೆ ಹುಟ್ಟಿಬಂತು.

ಮಗು ತಾಯಿಯ ಹೊಟ್ಟೆಯಲ್ಲಿರುವಾಗ, ತಾಯಿಯ ಮೈಯಲ್ಲಿ ಅತಿ ಮಹತ್ತರವಾದ ದೇವತಾಕಳೆ ತುಂಬಿದ್ದುದನ್ನು ಕಂಡವರು ಮಗುವಿಗೆ **ಮಹದೇವಿ** ಎಂದು ಹೆಸರಿಟ್ಟರು.

ನಿರ್ಮಲದೇವ ಸುಮತೀದೇವಿಯರ ಇಷ್ಟಾರ್ಥವನ್ನು ಈಡೇರಿಸುವ ಕಲ್ಪಲತೆಯಂತೆ ಮಹದೇವಿ ಬೆಳೆಯುತ್ತಿದ್ದಳು. ಭಕ್ತಿಯ ಬಳ್ಳಿಯಂತೆ, ಭಕ್ತಿಯಲ್ಲಿ ತಾನಲ್ಲದೆ ಇನ್ನಿಲ್ಲ ಎಂಬಂತೆ, ಬೆಳೆಯುತ್ತಿದ್ದಳು. ಬರುತ್ತಬರುತ್ತ, ಯೌವನದ ಕಳೆಯೇರುತ್ತ ಬಂದಂತೆಲ್ಲಾ ಪುಟಕ್ಕೆ ಇಕ್ಕಿದ ಚಿನ್ನದಂತೆ ಕಾಂತಿಮತಿಯಾಗುತ್ತ ಬಂದಳು.

ಹೀಗೇ ಇರಬೇಕಾದರೆ—ಒಂದು ದಿನ ಆ ಪುರದ ಅರಸನು ತನ್ನ ಸೈನ್ಯಗಳ ಪ್ರದರ್ಶನವನ್ನು ಪರಿಶೀಲಿಸಿಕೊಂಡು ಅರಮನೆಗೆ ಹಿಂದಿರುಗುತ್ತಿದ್ದನು. ಮಹದೇವಿ ಆ ಸಂಭ್ರಮವನ್ನು ಕೇಳಿ ಬಂದು, ಬಾಗಿಲಲ್ಲಿ ನೋಡುತ್ತ ನಿಂತಳು. ಹಾಗೆ ನಿಂತ ಮಹದೇವಿಯನ್ನು ಅರಸನು ಕಂಡನು. ಆ ಕ್ಷಣದಲ್ಲಿ ಅವನಿಗೆ ಅವಳ ಮೇಲೆ ಆಸೆಯಾಯಿತು.

“ಈ ಕನ್ಯೆ ಯಾರ ಮಗಳು? ಕೇಳಿ ಬನ್ನಿರೋ” ಎಂದ ಕೂಡಲೆ ಚಾರರು ಓಡಿಹೋಗಿ, ಇಂತಹವರ ಮಗಳು ಎಂದು ಬಂದು ತಿಳಿಸಿದರು. “ಇವಳನ್ನು ನಾನು

ಮದುವೆಯಾಗುತ್ತೇನೆ” ಎಂದುಕೊಂಡು, ಕೌಶಿಕನೆಂಬ ಆ ದೊರೆ ಅರಮನೆಯನ್ನು ಸೇರಿದನು.

“ಬಲಾತ್ಕಾರದಿಂದ ಎಳೆದು ತರಿಸಿದರೆ, ಅವಳ ಮನಸ್ಸಿಗೆ ಮುನಿಸು, ಜೊತೆಗೆ ನನಗೂ ಅಪಕೀರ್ತಿ. ಆದ್ದರಿಂದ ಕೆಲವರನ್ನು ಕಳಿಹಿ, ಒಪ್ಪಿಸುತ್ತೇನೆ” ಎಂದು ತನ್ನ ಹೆಗ್ಗಡಿತಿಯರನ್ನು ಮಹದೇವಿಯ ಮನೆಗೆ ಕಳಿಹಿದನು.

ಅವರು ಬಂದು “ಅರಸನು ನಿಮ್ಮ ಮಗಳನ್ನು ಮದುವೆಯಾಗಬೇಕೆಂದು ಬಯಸುತ್ತಾನೆ. ಒಪ್ಪಿ, ಮಹದೇವಿಯನ್ನು ಕಳಿಹಿಕೊಡಿ” ಎಂದರು.

“ರಾಜಕುಲದವನಿಗೆ ನಾವು ನಮ್ಮ ಮಗಳನ್ನು ಕೊಡುವವರಲ್ಲ” ಎಂದರು, ಮಹದೇವಿಯ ತಾಯಿತಂದೆ.

“ಅರಸನಿಗೆ ನೀವು ಎದುರಾಡುವುದೆ? ಸುಮ್ಮನೆ ಸರಸದಿಂದ ಕೊಡುವುದು ಒಳ್ಳೆಯದು. ವಿರಸವಾದರೆ, ನೀವು ಮಾಡುವುದೇನು? ಈ ಹುಚ್ಚುತನ ಸಾಕು. ಅರಸನ ಮನೆಗೆ ಮದುವೆಯಾದರೆ, ನಿಮ್ಮ ಮಗಳು ಉಂಡು ಉಟ್ಟು ಸುಖವಾಗಿ ಇರುವಳು. ನಾನಾ ರೀತಿಯಿಂದ ಒಳ್ಳೆಯ ಸಂಬಂಧ.” ಎಂದು ಆ ಹೆಗ್ಗಡಿತಿಯರು ಭಯದಿಂದ, ನಯದಿಂದ ಹೇಳಿ ನೋಡಿದರು.

“ತಾಯಿಯನ್ನು ಮಾರಿ, ತೊತ್ತನ್ನು ಕೊಂಡುಕೊಳ್ಳುವ ಹಾಗಾಯಿತು! ಉಂಡು ಉಟ್ಟು ಇರುವುದಕ್ಕೋಸ್ಕರ ಕುಲವಲ್ಲದ ಕುಲಕ್ಕೆ ಕನ್ಯೆಯನ್ನು ಕೊಟ್ಟರೆ, ಕೇಡಾಗದಿದ್ದೀತೆ? ರಾಯ ನಮಗೇನು ಮಾಡಿಯಾನು ಬಿಡಿ. ಈ ಮಾತು ಸಾಕು” ಎಂದು ನಿರ್ಮಲನು ತನ್ನ ಮನಸ್ಸಿನಲ್ಲಿ ಇದ್ದುದನ್ನು ಇದ್ದಂತೆ ಹೇಳಿದನು.

ಮತ್ತೆಯೂ ಹೇಳಿದನು, ಆ ನಿರ್ಮಲ: “ನಿಜವಾಗಿ, ಆಕೆಯನ್ನೇ ಕೇಳಿರಿ, ಆಕೆ ಏನು ಸಣ್ಣಮಗಳೆ? ಉಪಾಯವಾಗಿ ಆಕೆಗೆ ಹೇಳಿ, ಅವಳನ್ನೇ ಒಡಂಬಡಿಸಿರಿ, ಆಕೆ

ತಾನು ಆಗಬಹುದು ಎಂದರೆ, ನಮಗೇನು, ನಾವು ಆಗಲೇ ಮದುವೆಮಾಡಿ ಕೊಡುವೆವು."

ಹೆಗ್ಗಡಿತಿಯರು "ಇದೂ ಸರಿಯೆ!" ಎಂದು, ಅಲ್ಲಿಂದ ಹೋಗಿ, ಮಹದೇವಿಯನ್ನೇ ಕೇಳಿದರು. ಮಹದೇವಿ "ಈ ದೊರೆಯ ದುಷ್ಟವಾದ ಆಸೆಗೆ ನಾನು ಮದ್ದುಮಾಡುತ್ತೇನೆ" ಎಂದು ಮನಸ್ಸಿನಲ್ಲಿಯೇ ಎಂದುಕೊಂಡಳು.

ಕರ್ಪೂರಕ್ಕೆ ಪರಿಮಳವನ್ನು ಯಾರು ಇಕ್ಕಿದವರು? ಕೋಗಿಲೆಗೆ ಸೊಗಸಾದ ಸ್ವರವನ್ನು ಯಾರು ಕಲಿಸಿದವರು? ಹಂಸಕ್ಕೆ ಹೆಜ್ಜೆಯಿಡುವುದನ್ನು ಯಾರು ಹೇಳಿಕೊಟ್ಟವರು? ಇವುಗಳಿಗೆ ಆಯಾ ಗುಣ ಹೇಗೆ ತನ್ನಷ್ಟಕ್ಕೆ ತಾನೇ ಬರುವುದೋ ಹಾಗೆಯೇ ಮಹದೇವಿಗೂ ಹೇಳಬೇಕಾದ ಉತ್ತರ ತನಗೆ ತಾನೇ ತೋಚಿತು.

"ಅರಸನಿಗೆ ನಾನೇ ಬೇಕಾಗಿದ್ದರೆ, ನಾನು ಏನು ಹೇಳಿದರೆ ಅದನ್ನು ಮಾಡಲಿ. ಆತನು ತಾನೇ ಬಂದು, ನನ್ನ ಮನೋನುರಾಗವನ್ನು ಸಲಿಸುವೆನೆಂದು ಶಪಥ ಮಾಡಿಕೊಡಲಿ." ಎಂದಳು.

"ಇಷ್ಟೇ ತಾನೇ!" ಎಂದು ಆ ಹೆಗ್ಗಡಿತಿಯರು ಹೋಗಿ, ರಾಜನಿಗೆ ಹೇಳಿದರು. "ಇಷ್ಟೇ ತಾನೆ!" ಎಂದು ಅರಸನು ತಾನೂ ಮಹಾ ಸುಮ್ಮಾನದಿಂದ ನಿರ್ಮಲನ ಮನೆಗೆ ಬಂದನು.

ಮಹದೇವಿಯನ್ನು ಕಂಡವನೇ, ಕಾಸಿ ಕರಗಿದ ಲೋಹದ ಹಾಗಾಗಿ ಹೋದನು. ಆಕೆಯನ್ನು ಮದುವೆಯಾಗಬೇಕೆಂಬ ಆಸೆ ಅಧಿಕವಾಯಿತು.

ದೊರೆ ಶಸಥ ಮಾಡಿದ: "ಕೇಳು, ಮಹದೇವಿ: ಮೊದಲು ನಿನ್ನ ಬಯಕೆಯನ್ನು ಸಲ್ಲಿಸಿ, ಅನಂತರ ನಾನು ನಿನ್ನನ್ನು ಒಲಿಸಿಕೊಳ್ಳುವೆನು ಹಾಗಲ್ಲದೆ, ನಾನು ದೊರೆ ಎಂಬ ಗರ್ವದಿಂದ ಬಿರಿಸು ಮಾತನ್ನಾಡಿ ನಿನ್ನನ್ನು ಬಲಾತ್ಕರಿಸುವವನನಲ್ಲ. ನೀನು ಕೇಳಿದ್ದನ್ನು ಕೊಡದೆಯೇ ನಾನು ಮತ್ತೆ ನಿನಗೆ ಆಸೆ ಮಾಡಿದೆನಾದರೆ, ಸುಳ್ಳು ಹೇಳಿದವನ ದುರ್ಗತಿ

ನನಗಾಗಲಿ; ಜೀವಹಿಂಸೆ ಮಾಡಿದವನ, ತಾಯಿ ಮಕ್ಕಳಿಗೆ ಜಗಳ ತಂದಿಕ್ಕಿದವನ, ಮಿತ್ರದ್ರೋಹ ಮಾಡಿದವನ, ಚಾಡಿ ಹೇಳಿದವನ, ಜಿಪುಣನ, ವೃಥಾ ಕೋಪಿಸಿದವನ ದುರ್ಗತಿಗಳು ನನಗಾಗಲಿ!" ಎಂದು ಆಣೆಯಿರಿಸಿಕೊಂಡನು.

"ನನಗೆ ಇದು ಒಳ್ಳೆಯ ಉಪಾಯ ಸಿಕ್ಕಿತು" ಎಂದುಕೊಂಡು ಮಹದೇವಿ ಮತ್ತೆ "ದೊರೆಯೆ, ನಾನು ಹೇಳಿದ್ದನ್ನು ನೀನು ಕೇಳದ ಆ ಕ್ಷಣವೆ ನಾನು ನಿನ್ನನ್ನು ಬಿಟ್ಟು ಹೋಗತಕ್ಕವಳು. ಇದು ನಿಶ್ಚಯ." ಎಂದಳು.

"ಹಾಗೇ ಆಗಲಿ. ಏನು ಮಾಡಲುಬೇಕು, ಹೇಳು." ಎಂದ, ದೊರೆ.

"ನೀನು ಶಿವಭಕ್ತನಾದರೆ ನಾನು ನಿನ್ನನ್ನು ಸೇರುವೆನು. ಇಲ್ಲದಿದ್ದರೆ, ಇಲ್ಲ. ನಾನು ಹೇಳುವುದಿಷ್ಟೆ." ಎಂದಳು ಮಹದೇವಿ.

ಆ ಮಾತು ಕೇಳಿ, ದೊರೆಯ ಸುಮ್ಮಾನ ಹೋಗಿ ದುಮ್ಮಾನವಾಯಿತು.

"ನಮಗೆ ಶಿವಭಕ್ತಿಯನ್ನು ಮಾಡುವುದಕ್ಕೆ ಸಮಯ ಹೊಂದಿಕೆಯಾಗುವುದಿಲ್ಲ." ಎಂದ ದೊರೆ.

"ಹಾಗಾದರೆ ನಮಗೂ ನಿಮ್ಮ ಜೊತೆಯಲ್ಲಿರಲು ಹೊಂದಿಕೆಯಾಗುವುದಿಲ್ಲ. ಇನ್ನು ನಮಗೂ ನಿಮಗೂ ಸಂಬಂಧವಿಲ್ಲ, ಬಿಟ್ಟಿತು" ಎನ್ನುತ್ತ, ಅರಸನು ಕೊಟ್ಟಿದ್ದ ಉಡುಗೊರೆ ತೊಡಿಗೆಗಳನ್ನು ಕಳಚಿ ಹಿಂದಕ್ಕೆ ಕೊಟ್ಟುಬಿಟ್ಟಳು.

ಆಕೆಯ ದೃಢನಿಶ್ಚಯವನ್ನು ಕಂಡು, ಅರಸನ ಆಸೆ ಜಾರಿತು. ಕಾಮ ಕಡಿಮೆಯಾಯಿತು. ವಿವೇಕ ವರ್ಧಿಸಿತು. ತಾನು ಆಡಿದ ಭಾಷೆಯನ್ನು ತಾನು ಉಳಿಸಿಕೊಳ್ಳಬೇಕೆಂದು "ಹಾಗಾದರೆ, ಹೋಗು" ಎಂದು ನಿರಾಶೆಯಿಂದ ಆಕೆಯನ್ನು ಬಿಟ್ಟುಕೊಟ್ಟನು.

ಮಹದೇವಿ ಆಗಲೇ ತೀವ್ರವಾದ ವಿರಕ್ತಿಯ ವೇಷವನ್ನು ತಾಳಿದಳು. ಕೈಯಲ್ಲಿ ಇಷ್ಟಲಿಂಗವನ್ನು ಧರಿಸಿ, ಮೈಗೆ ಪಾವನವಾದ ವಿಭೂತಿಯನ್ನು ತೊಡೆದುಕೊಂಡು, ಬಿಚ್ಚಿ ಬಿಟ್ಟ ತನ್ನ ತಲೆಗೂದಲಿಂದ ಮೈಯನ್ನು ಕಾಲವರೆಗೆ ಮುಚ್ಚಿ, ರಾಹು ನುಂಗಿದ ಚಂದ್ರಮನ ಹಾಗೆ ನೆಟ್ಟನೆ ಅಲ್ಲಿಂದ ಹೊರಟಳು.

ತಾಯಿ ತಂದೆ, ನಂಟರು ಇಷ್ಟರು, ಬಂಧು ಬಳಗ, ಇತರ ಜನ ಎಲ್ಲಾ ಅಳುತ್ತ ಬಂದು ಅಡ್ಡ ನಿಂತರು. "ಎಲೆ ಅಕ್ಕ! ಏಕೆ ಹೀಗೆ ಮರುಳಾದೆ?" ಎಂದರು.

ಮಹದೇವಿ ಎಂದಳು: "ಇಂದಿನಿಂದ ಮೊದಲು ಈ ದೇಹ ಶಿವನಿಗೆ ಅರ್ಪಿತವಾದದ್ದು. ಇನ್ನು ನನ್ನ ಹಂಬಲನ್ನು ಮರೆತು ಬಿಡಿರಿ." ಎಂದು, ಅಲ್ಲಿಂದ ತೆರಳಿದಳು.

ಸಜ್ಜನರು ಇದ್ದ ಕಡೆಗಳಲ್ಲಿ, ಜನರೇ ಇಲ್ಲದ ಕಡೆಗಳಲ್ಲಿ, ಗಿಡವಿದ್ದಲ್ಲಿ, ಮರವಿದ್ದಲ್ಲಿ, ಗಿರಿಯಿದ್ದಲ್ಲಿ, ಕೊಳವಿದ್ದಲ್ಲಿ, ಕಣಿವೆಯಿದ್ದಲ್ಲಿ, ಬಳ್ಳಿಯಿದ್ದಲ್ಲಿ, ಅಲ್ಲಮಪ್ರಭು ಎನಿಸಿದ ಗುರು ಗುಹೇಶ್ವರನನ್ನು ಮಹದೇವಿ ಅರಸುತ್ತಿದ್ದಳು.

ಹೀಗೇ ಕೆಲವು ಕಾಲವಾಯಿತು. ಅಲ್ಲಮಪ್ರಭುದೇನರು ಬಸವಣ್ಣನವರನ್ನು ಕಾಣುವುದಕ್ಕಾಗಿ ಕಲ್ಯಾಣಕ್ಕೆ ಬಿಜಯಮಾಡಿದರು, ಎಂದು ಹೇಳಲಿಲ್ಲವೆ, ಅಮ್ಮ! ಆಗ ಮಹದೇವಿ ಅಕ್ಕನವರು ತಾವೂ ಕಲ್ಯಾಣಕ್ಕೆ ಬಂದರು.

"ಗುರುವನ್ನು ನಾನು ಹುಡುಕುತ್ತೇನೆ!" ಎಂದು ಅಕ್ಕನವರು ಬೆಟ್ಟ ಕಣಿವೆಗಳನ್ನು ತಿರುಗಿದರು, ಭೂಮಿಯಲ್ಲೆಲ್ಲ ತೊಳಲಿದರು, ಕಾತರಿಸಿ ಕಾಯವನ್ನು ಕರಗಿಸಿದರು. ಕಡೆಗೆ ಕಲ್ಯಾಣಕ್ಕೆ ಬಂದರು.

ವೇದಾದಿಗಳು ಯಾರನ್ನು ಹೋಗಿ ಹಿಡಿಯಲಾರವೋ ಅಂತಹ ಅಲ್ಲಮಪ್ರಭುದೇವರನ್ನು ಅವರು ಅಲ್ಲಿ ಕಂಡರು. ಅವರನ್ನು ಹಾಡಿಹೊಗಳಿ, ಅವರ ಚರಣಗಳಲ್ಲಿ ಮೈಯನ್ನು ಚೆಲ್ಲಿದರು. ಸುತ್ತ ಇದ್ದ ಶಿವಗಣಕ್ಕೆ ಶರಣು ಎಂದರು. ತಾವು ಒಂದು ಭಕ್ತಿಯ ಗೂಡು ಎಂಬಂತೆ ಮಹದೇವಿ ಅಕ್ಕನವರು ಕಾಣಿಸಿಕೊಂಡರು.

"ಲೋಕದಲ್ಲಿ ಹೆಣ್ಣಾಗಿ ಹುಟ್ಟಿಯೂ, ಹೀಗೆ ದೇಹದ ಮೇಲಿನ ಲೋಭ ಮೋಹಗಳನ್ನು ನೂಕಿ, ನಿಃಸ್ಪೃಹೆಯಾಗಿ ನಿಲ್ಲುವವರು ಯಾರು? ಈಕೆಗೆ ಯಾರು ಎಣೆ!" ಎನ್ನುತ್ತಾ ಬಸವಣ್ಣನವರೇ ಮುಂತಾದವರು "ಶರಣು! ಶರಣು!" ಎಂದು ಅಕ್ಕನವರನ್ನು ಹೊಗಳಿದರು.

"ಕೂದಲು ಬಿಳಿದಾಗಿ, ಚರ್ಮ ಸುಕ್ಕುಹಿಡಿದು, ದೇಹ ಸಡಿಲವಾಗಿ, ಅನೇಕವಾಗಿ ವಯಸ್ಸು ಆದವರು ಮಾತ್ರ ದೊಡ್ಡವರೇನು? ಬೆಟ್ಟ ಇದ್ದ ಹಾಗೆ ಬಹುದಿನ ಇದ್ದಷ್ಟರಿಂದಲೇ ಏನು ಹಿರಿತನ ಬಂತು? ಮಹದೇವಿಯಂತೆ ಸದಾ ನಿರಹಂಕಾರದಿಂದ ಇರುವುದು ಇದೇ ನಿಜವಾದ ಹಿರಿತನ!" ಎಂದು ಶಿವಭಕ್ತರೆಲ್ಲ ಕೊಂಡಾಡಿದರು.

ಆಗ ಅಲ್ಲಿ ಅಕ್ಕನವರ ಚಿತ್ರವು ಅತ್ಯಂತ ನಿರ್ಮಲವಾಗಿದ್ದುದನ್ನು ಅರಿತು, ಪ್ರಭು ಸಂತೋಷಿಸಿದರು. "ನನ್ನನ್ನು ಕಂಡು ತಿಳಿಯಬೇಕೆಂದೇ ಇಷ್ಟು ತೊಳಲಿ ಬಳಲಿದ್ದಾಳೆ. ಈಕೆಯ ಆಯಾಸವನ್ನು ಇನ್ನು ನಿಲ್ಲಿಸಬೇಕು." ಎಂದುಕೊಂಡರು.

"ಇಷ್ಟಲಿಂಗವನ್ನು ಆರೈಕೆಮಾಡಿ, ಪ್ರಾಣಲಿಂಗವನ್ನು ಸಾಧನೆ ಮಾಡಬೇಕು— ಎಂಬ ಪುರುಷಾರ್ಥಕ್ಕೆ ಸರ್ವಾಂಗವನ್ನೂ ಹೀಗೆ ಸವೆಸಿದವರು ಬೇರೆ ಯಾರು ಉಂಟು? ಎಲ್ಲರೂ ಬಾಯಲ್ಲಿ ಹೇಳಿದವರೇ ಹೊರತು, ಮಹದೇವಿಯಂತೆ ಭಕ್ತಿಯನ್ನು ಮಾಡಿದವರ ನಾ ಕಾಣೆ!" ಎಂದರು. ಹಾಗೆಂದು, ಜೀವವನ್ನು ದೇಹದಿಂದ ಬೇರೆ ಮಾಡುವುದು ಹೇಗೆ, ಬೇರೆಯಾದ ಜೀವವನ್ನು ಪರಮನಲ್ಲಿ ಸೇರಿಸಿ

ಮುಕ್ತಿಪಡೆಯುವುದು ಹೇಗೆ, ಇದನ್ನು ಕುರಿತು ಪ್ರಭು ಅಕ್ಕನವರಿಗೆ ಉಪದೇಶಮಾಡಿದರು.

ಅನಂತರ, ಅಕ್ಕನವರು ಎಲ್ಲರಿಗೂ ಶರಣಾರ್ಥಿ ಎಂದು, ಎಲ್ಲರ ಹರಕೆಯನ್ನೂ ಕೈಕೊಂಡು, ಎಲ್ಲಾ ಶರಣರ ಚರಣಗಳನ್ನೂ ನೆನಪಿನಲ್ಲಿ ನಿಲ್ಲಿಸಿಕೊಂಡು, ಅರ್ತಿಯಿಂದ ಪ್ರಭುವನ್ನು ಬೀಳ್ಕೊಂಡು, ಪರಮೋತ್ಸಾಹದಿಂದ ಹೊರಟರು. ಗುರುವಿನ ಉಪದೇಶದಂತೆ ನಡೆದು ಬದುಕಿ, ಪರಮಪದವನ್ನು ಪಡೆದರು.

ಈಗ ಮತ್ತೆ ಕೈಲಾಸಕ್ಕೆ ಬರಬೇಕು, ಅಮ್ಮ.

ಇಲ್ಲಿ ಈಚೆ ಪ್ರಭುದೇವರು ಹೀಗೆ ತಮ್ಮ ಭಕ್ತರ ಹೃದಯಗಳೆಂಬ ಕಮಲಾಕರಗಳಲ್ಲಿ ತಾವು ಹಂಸೆಯಂತೆ ಹರುಷದಿಂದ ಒಲಿದಾಡುತ್ತಿದ್ದರೆ; ಅಲ್ಲಿ ಆಚೆ ಕೈಲಾಸಪುರದಲ್ಲಿ ಪರಮೇಶ್ವರಿಯು ಪರಮೇಶ್ವರನನ್ನು ಪ್ರಶ್ನೆಮಾಡುತ್ತಾ ಇದ್ದಾಳೆ:

“ಎಲೆ ಸದಾಶಿವ! ’ಭೂಮಿಯಲ್ಲಿ ಹುಟ್ಟಿ, ಅಲ್ಲಮಪ್ರಭುವಿನ ಒಲವಿನಿಂದ ನಿತ್ಯತ್ವವನ್ನು ಸಾಧಿಸಿಕೊಳ್ಳಿ’ ಎಂದು ನನ್ನ ಸಾತ್ತ್ವಿಕಕಳೆಯನ್ನೂ ನಿನ್ನ ಶಿವಗಣವನ್ನೂ ಅಂದು ಕಳುಹಿದೆಯಲ್ಲಾ. ಅವರೆಲ್ಲಾ ಏನಾದರು?”

ಆಗ ಈಶ್ವರನು, ಅವರು ಏನಾದರೆಂಬುದನ್ನು ತನ್ನ ದಿವ್ಯಜ್ಞಾನದಿಂದ ತಿಳಿದು ಪಾರ್ವತಿಗೆ ಹೇಳಿದನು:

“ಕೇಳು ದೇವಿ: ನಿನ್ನ ಅಂಶದ ಮಹದೇವಿಯೂ ನನ್ನ ಅಂಶದ ಗಣಗಳೂ ರುದ್ರಕನ್ಯೆಯರೂ ತಮ್ಮ ನಾಮ ರೂಪ ಕ್ರಿಯೆಗಳನ್ನು ನಾಶಮಾಡಿ, ನಿತ್ಯಸುಖವನ್ನು ಪಡೆದರು!”

ಆಗ ಪಾರ್ವತೀದೇವಿ "ನಿಮ್ಮವರು ಕೈಲಾಸಪದವಿಯನ್ನು ಮೀರಿ ನಿರುಪಮವಾದ ನಿತ್ಯಪದವಿಯನ್ನು ಕೊಂಡರೆಂಬುದು ಬಹಳ ಲೇಸು! ಅವರಿಗೆ ಆ ಸುಖಗಳನ್ನು ಅಲ್ಲಮನು ನಿರ್ಣಯಿಸಿ ಕೊಟ್ಟನೆಂಬುದು ಮತ್ತೂ ಸಂತೋಷ. ಹೌದು, ಶಿವನೆ. ನೀನು ಹೇಳಿದ ಹಾಗೆ ನಿನ್ನ ಅಲ್ಲಮಪ್ರಭುದೇವನು ಘನವಾದ ಮಹಿಮಾವಲಂಬನು. ಈಗ, ನಿನ್ನ ಕರುಣೆಯಿಂದ ನಾನು ಆ ಅಲ್ಲಮನ ನಿಜಸ್ವರೂಪವನ್ನು ಅರಿತುಕೊಂಡೆನು." ಎಂದು ಪರಶಿವನಲ್ಲಿ ಪರಮತೃಪ್ತಿಯಿಂದ ಬಿನ್ನವಿಸಿಕೊಂಡಳು.

## ಪ್ರಭುಲಿಂಗಲೀಲೆ

"ಈ ಪ್ರಕಾರವಾಗಿ ಪಾರ್ವತೀಪರಮೇಶ್ವರರು ಸುಖಸಂಕಥಾ ವಿನೋದಗಳಿಂದ ಕೈಲಾಸದಲ್ಲಿ ಇರುತ್ತಿದ್ದರು—ಎಂಬಲ್ಲಿಗೆ ಅಲ್ಲಮಪ್ರಭುದೇವರ ಕಥೆಗೆ ಮಂಗಳಮಹಾ ಶ್ರೀಶ್ರೀಶ್ರೀ!" ಎಂದು ಶಿವು ರಾಗ ಎಳೆಯುತ್ತಾ "ಹರಹರ ನಮಃ ಪಾರ್ವತೀಪತಯೇ ಹರಹರ ಮಹಾದೇವ!" ಎಂದು ಘೋಷಮಾಡಿದ.

"ಹರಹರ ಮಹಾದೇವ!" ಎಂದು ಹೊರಗಿನಿಂದ ಇನ್ನೊಂದು ದೊಡ್ಡ ಗಂಟಲಿನ ಘೋಷ ಬಂದು ಅವನದಕ್ಕೆ ಪೂರೈಸಿಕೊಂಡಿತು.

"ಬಾಗಿಲು ತೆಗೆಯೊ, ನಿಮ್ಮ ತಂದೆ ಬಂದರು!" ಎಂದು ಶಿವೂ ತಾಯಿ ಸಡಗರದಿಂದ ಎದ್ದರು.

"ಏನು? ತಾಯಿ ಮಗ ದೀಪ ಹಚ್ಚಿಕೊಂಡು ಶಿವಕಥೆ ನಡಸುವ ಸಂಭ್ರಮದಲ್ಲಿ ಮನೆಯ ಬಾಗಿಲಿನ ಮುಂದೆ ಮೋಟರುಕಾರು ಬಂದು ನಿಂತರೂ ಗೊತ್ತೇಆಗುವಂತಿಲ್ಲ!" ಎಂದರು, ಶಿವೂತಂದೆ.

"ಎಷ್ಟು ಹೊತ್ತಾಯ್ತು, ಬಂದು? ಕೇಳಿಸಲೇ ಇಲ್ಲವೆ, ಸದ್ದು! ನಿನಗೆ ಕೇಳಿಸಿತೇನೊ, ಶಿವು?"

"ಇಲ್ಲವಲ್ಲಮ್ಮ, ಎಲ್ಲೋ, ಕಾರು ಕೆಟ್ಟುಹೋಗಿ, ಅಪ್ಪ ಕಾಲಿನಲ್ಲಿ ಬಂದಿರಬೇಕು!"

"ಕೊರಮಾ! ಕಂಡುಕೊಂಡುಬಿಟ್ಟ! ನಿಜವೆ, ಆ ಎರಡನೇ ದೀಪದ ಕಂಬದ ಹತ್ತಿರ ಪೆಟ್ರೋಲ್ ಮುಗಿದುಹೋಯ್ತು. ಹಾಗೇ ಇಳಿಜಾರಿನಲ್ಲಿ ಈಜಿಕೊಂಡು ಬಂತು, ಗಾಡಿ. ದೀಪ ನೋಡಿದೆ. ಇವನ ದನಿ ಕೇಳಿಸಿತು. ಅದೇನು ಹೇಳುತಾನೆ ಕೇಳೋಣ

ಎನ್ನುವ ಹೊತ್ತಿಗೆ, ಮುಗಿಯಿತು ಎಂದ! ಅದು ಇರಲಿ. ಗಾಡಿಖಾನೆ ಬಾಗಿಲು ತೆಗೆ. ಕಾರು ಒಳಗೆ ಬಿಟ್ಟು ಬರುತ್ತೇನೆ."

"ಕಾರನ್ನು ಮಗು ಬಿಟ್ಟು ಬರುತಾನೆ. ನೀವು ಕೈಕಾಲು ತೊಳೆದು ಕೊಳ್ಳಿ. ಊಟ? ಆಯಿತಾ, ಒಂದು ಲೋಟ ಹಾಲಿಟ್ಟಿದೆ. ಬಿಸಿಯಾಗಿರಬೇಕು, ತರುತೇನೆ."

ಶಿವು ಕಾರನ್ನು ಗಾಡಿಖಾನೆಗೆ ಸೇರಿಸಿ ಬೀಗಹಾಕಿ ಬರುವವೇಳೆಗೆ, ಶಿವೂತಂದೆ ಹಾಲಿನ ಲೋಟ ಕೈಗೆ ಎತ್ತಿಕೊಂಡಿದ್ದರು. ಶಿವು ಏನು ಹೇಳುತಾ ಇದ್ದ ಎನ್ನುವುದನ್ನ ಶಿವೂತಾಯಿ ವರದಿಮಾಡಿದ್ದರು.

"ಆ! ಮುಂದಕ್ಕೆ ಹೇಳಯ್ಯ, ನಿನ್ನ ಕಥೆಯನ್ನ ನಾವೂ ಕೇಳೋಣ." ಎಂದರು, ಶಿವೂತಂದೆ.

ಶಿವೂಗೆ ಒಂದು ಕಡೆ ಸಂಕೋಚ—ತಂದೆಯ ಎದುರಿಗೆ ಹೇಗೆ ಬಾಯಿಬಿಡುವುದು, ಎಂದು; ಇನ್ನೊಂದು ಕಡೆ ಅಭಿಮಾನ—ಹೇಗೂ ಕೇಳಿದ್ದಾರೆ, ತಾನು ಕಲಿತದ್ದನ್ನು ಅವರೆದುರಿಗೆ ಒಪ್ಪಿಸಿ ಸೈ ಎನ್ನಿಸಿಕೊಳ್ಳಬೇಕು ಎಂದು. ಕಡೆಗೆ, ಮನಸ್ಸು ಗಟ್ಟಿಮಾಡಿ, ನಾಲಗೆ ಸಡಿಲಬಿಟ್ಟು, ತನಗೆ ತಿಳಿದದ್ದಕ್ಕೆ ಒಂದು ಕಥೆಯ ಕಟ್ಟು ಕೊಟ್ಟು, ಹೇಳಿದ.

ಈಗ ನಾನು ಹೇಳುವುದು, ಸುಮಾರು ಐನೂರು ವರ್ಷಗಳಿಗೆ ಹಿಂದೆ ನಡೆದ ಸಂಗತಿ. ಸಂಗತಿ—ಅರ್ಧ ನಡೆದ ಚರಿತ್ರೆ, ಅರ್ಧ ನಂಬಿದ ಕಥೆ. ವಿಜಯನಗರ ಸಂಸ್ಥಾನದಲ್ಲಿ ಪ್ರೌಢದೇವರಾಯರು ಆಳುತ್ತಿದ್ದ ಕಾಲ, ಅದು.

ಒಂದು ದಿವಸ ಎಂದಿನಂತೆ ರಾಯರ ಒಡ್ಡೋಲಗ ಸೇರಿತ್ತು. ಕವಿಗಳು, ಗಮಕಿಗಳು, ವಾದಿಗಳು, ವಾಗ್ಮಿಗಳು, ಗಾಯಕರು, ವಾದಕರು, ನರ್ತಕರು, ಮುಂತಾದ ರಸಿಕ ಪಂಡಿತರೆಲ್ಲ ಸಭೆಯಲ್ಲಿ ಇದ್ದರು.

ಆರಂಭದಲ್ಲಿ ಹಂಪೆಯ ವಿರೂಪಾಕ್ಷಸ್ವಾಮಿಯನ್ನು ಕುರಿತು ಪ್ರಾರ್ಥನೆ ನಡೆಯಿತು. ಅದಾದ ಅನಂತರ, ಆ ಸಭೆಯಲ್ಲಿ ಮಂಡಿಸಿದ ವಿರಕ್ತರೊಬ್ಬರು, ಎದ್ದರು. "ಅರಸರ ಅಪೇಕ್ಷೆಯ ಮೇರೆಗೆ, ಅಲ್ಲಮಪ್ರಭುದೇವರ ಕೆಲವೊಂದು ವಚನಗಳನ್ನು ಈಗ ಉದ್ಧಾರ ಮಾಡುತ್ತೇವೆ. ನಮಗೆ ತಿಳಿದಷ್ಟು ಮಟ್ಟಿಗೆ ಆ ವಚನಗಳಿಗೆ ಅರ್ಥ ಹೇಳುತ್ತೇವೆ." ಎಂದು ಹಾಡಿ, ಅದಕ್ಕೆ ಅರ್ಥ ಹೇಳಿದರು.

"ಇದು ಆರಂಭದ ವಚನ:

'ಎತ್ತಣ ಮಾಮರ? ಎತ್ತಣ ಕೋಗಿಲೆ? ಎತ್ತಣಿಂದೆತ್ತ

ಸಂಬಂಧವಯ್ಯಾ? ಬೆಟ್ಟದ ನೆಲ್ಲಿಯಕಾಯಿ, ಸಮುದ್ರ

ದೊಳಗಣ ಉಪ್ಪು, ಎತ್ತಣಿಂದೆತ್ತ ಸಂಬಂಧ? ಗುಹೇಶ್ವರ

ಲಿಂಗಕ್ಕೆಯು ಎನಗೆಯು ಎತ್ತಣಿಂದೆತ್ತ ಸಂಬಂಧವಯ್ಯ'

ನಾವು ಸಾಧಾರಣ ಜನರು 'ನಮಗೂ ಶಿವನಿಗೂ ಎಲ್ಲಿಯ ಸಂಬಂಧ?' ಎಂದು ಸಾಮಾನ್ಯವಾಗಿ ಅಧೈರ್ಯಪಡುವುದುಂಟು, ನಿರಾಶೆಪಡುವುದುಂಟು. ಅದಕ್ಕೆ ಪ್ರಭುದೇವರು ಹೀಗೆ ಧೈರ್ಯ ಹೇಳುತ್ತಾರೆ. ಅದಕ್ಕೆ ಒಂದೆರಡು ದೃಷ್ಟಾಂತ ಕೊಡುತ್ತಾರೆ. ಮಾವಿನಮರ ಎಲ್ಲಿಯೋ ನೆಲದ ಮೇಲೆ ಇರುತ್ತದೆ, ಕೋಗಿಲೆ ಎಲ್ಲಿಯೋ ಅಂತರಿಕ್ಷದಲ್ಲಿ ಇರುತ್ತದೆ; ಆದರೆ, ವಸಂತಮಾಸ ಬಂದಿತೆಂದರೆ, ಆ ಕೋಗಿಲೆ ಆ ಮಾವಿನಮರಕ್ಕೆ ಬಂದು ಕೂಡುತ್ತದೆ. ಅದರ ಹಾಗೆಯೇ, ನೆಲ್ಲಿಯಕಾಯಿ ಬೆಟ್ಟದಮೇಲೆ ಬೆಳೆಯುತ್ತದೆ, ಉಪ್ಪು ಸಮುದ್ರದ ನೀರಲ್ಲಿ ಕರಗಿ ಅಡಗಿರುತ್ತದೆ. ಆದರೆ ನೆಲ್ಲಿಯ ಫಲ ಬಂದಕಾಲಕ್ಕೆ,

ಆ ಉಪ್ಪನ್ನು ಅದಕ್ಕೆ ಹೊಂದಿಸಿ, ಉಪ್ಪಿನಕಾಯಿ ಹಾಕುವುದಿಲ್ಲವೇ! ಅದರಂತೆಯೇ, ಗುರುವಿನ ಕರುಣೆ ಬಂದಕಾಲಕ್ಕೆ ಭೂಲೋಕದ ನರನಿಗೆ ಕೂಡ ಕೈಲಾಸದ ಶಿವ ಕಾಣಿಸಿಕೊಂಡು, ಕರವಶನಾಗುತ್ತಾನೆ.

"ಮತ್ತೊಂದು ವಚನ:

'ಕಾಲುಗಳೆರಡು ಗಾಲಿ ಕಂಡಯ್ಯ, ದೇಹವೆಂಬುದು

ತುಂಬಿದ ಬಂಡಿ ಕಂಡಯ್ಯ, ಬಂಡಿಯ ಹೊಡೆವವರೈವರು

ಮಾನಿಸರು. ಒಬ್ಬರಿಗೊಬ್ಬರು ಸಮವಿಲ್ಲಯ್ಯ, ಅದರಿಚ್ಛೆಯ

ನರಿದು ಹೊಡೆಯದಿದ್ದರೆ, ಅದರಚ್ಚು ಮುರಿಯಿತ್ತು ಕಾಣಾ,

ಗುಹೇಶ್ವರಾ.'

ಇದು ಉಪನಿಷತ್ತಿನಲ್ಲಿ ನಾವು ಕೇಳಿರುವ ಒಂದು ಮಹಾವಾಕ್ಯ. ಅದನ್ನೇ ಪ್ರಭು, ತಮ್ಮ ಅನುಭವದಿಂದ ಕಂಡುಕೊಂಡು, ಎಷ್ಟು ಚೆನ್ನಾಗಿ ತಿಳಿಯ ಕನ್ನಡದಲ್ಲಿ ಹೇಳಿದ್ದಾರೆ, ನೋಡಿ. ದೇಹ ಎಂಬುದು ಒಂದು ಗಾಡಿ. ಎರಡು ಕಾಲೂ ಅದರ ಎರಡು ಗಾಲಿ. ಒಂದು ಗಾಡಿಗೆ ಒಬ್ಬ ಸಾರಥಿ ಇದ್ದರೆ, ಅದು ಒಂದು ದಾರಿ ಹಿಡಿದು ಹೋಗುತ್ತದೆ. ಆದರೆ, ಈ ಗಾಡಿಗೆ ಐದು ಇಂದ್ರಿಯಗಳೆಂಬ ಐದು ಸಾರಥಿಗಳು. ಅವರಲ್ಲಿ ಒಬ್ಬರ ಮಾತು ಒಬ್ಬರು ಕೇಳುವುದಿಲ್ಲ. ಹೀಗಾದರೆ, ಬಂಡಿ ಎಲ್ಲಿಗೆ ತಾನೆ ಹೋಗಿ ತಲುಪೀತು? ಐವರೂ ಐದು ದಿಕ್ಕಿಗೆ ಎಳೆದು ಗಾಡಿ ಚುಕ್ಕಾಚೂರಾಗಿ ಹೋಗುತ್ತದೆ. ಆದ್ದರಿಂದ ದೇಹವನ್ನು ಸರಿಯಾಗಿ ನಡಸಿಕೊಳ್ಳಬೇಕಾದರೆ, ಇಂದ್ರಿಯಗಳನ್ನು ಹೋದ ದಾರಿಗೆ ಬಿಡದೆ, ಮನಸ್ಸೆಂಬ ಯಜಮಾನನು ಆ ಐದು ಸಾರಥಿಗಳನ್ನೂ ಬಿಗಿಯಿಟ್ಟುಕೊಂಡು, ನಡಸಬೇಕು. ಈ ಮನಸ್ಸು ತಾನೇನಾದರೂ ಇಂದ್ರಿಯಗಳಿಗೆ ವಶವಾಗಿ ವರ್ತಿಸಿದರೆ, ಅದನ್ನು ಕೋಡಗವೆಂದು ಕರೆಯುತ್ತಾರೆ. ಪ್ರಭು ಹೇಳುತ್ತಾರೆ:

’ನೀರ ನಡುವೆ ಒಂದು ಗಿಡ ಹುಟ್ಟಿತ್ತು. ಆ ಗಿಡದ

ಎಲೆಯ ಮೇಲೆ ಬಂದಿತ್ತೊಂದು ಕೋಡಗ. ಆ ಕೋಡಗದ

ಕೊಂಬಿನಲ್ಲಿ ಮೂಡಿತ್ತು ಅದ್ಭುತ. ಆ ಅದ್ಭುತವಳಿದಲ್ಲದೆ

ಶರಣನಾಗಬಾರದು, ಗುಹೇಶ್ವರಾ.’

ಇಲ್ಲಿ ’ನೀರು’ ಎಂಬುದು ಸಂಸಾರ. ’ಗಿಡ’ ಎಂಬುದು ಮನುಷ್ಯದೇಹ. ’ಎಲೆ, ಕೊಂಬೆ’ ಎಂಬುದು ದೇಹದ ಅಂಗಾಂಗ. ಅದರಲ್ಲಿ ಓಡಿಯಾಡುವ ’ಕೋಡಗ’ ಎಂಬುದು ಚಂಚಲ ಮನಸ್ಸು. ಮನಸ್ಸು ತನ್ನ ಚಂಚಲತೆಯನ್ನು ಬಿಟ್ಟು, ನಿಶ್ಚಲವಾದ ಹೊರತು, ಅದು ಶಿವನನ್ನು ಸಾಧಿಸುವಹಾಗಿಲ್ಲ—ಎಂಬುದು ಈ ವಚನದ ಅರ್ಥ.

“ಇನ್ನು ಅನೇಕರು ತಿಳಿಯದೆ, ವ್ಯರ್ಥವಾಗಿ ಬಾಹ್ಯಪೂಜೆ ಮಾಡಿ ಬಳಲುತ್ತಾರೆ. ಪ್ರಭು ಅವರನ್ನು ಕುರಿತು ಹೇಳಿದ್ದಾರೆ:

’ಹೊರಗನೆ ಕೊಯ್ದು ಹೊರಗನೆ ಪೂಜಿಸಿದವರ ಕಂಡು

ನಾಚಿದೆನಯ್ಯಾ! ಒಳಗೊಂದು ಅನಿಮಿಷಲಿಂಗವ ಕಂಡು,

ಎನ್ನ ಮನೋಪುಷ್ಪದಲ್ಲಿ ಪೂಜೆಯ ಮಾಡಿದರೆ, ನಾಚಿಕೆ

ಮಾದು, ನಿಸ್ಸಂದೇಹಿಯಾದೆನು, ಗುಹೇಶ್ವರಾ.’

ಹೊರಗಿನ ವಸ್ತುಗಳಿಂದ ಮಾಡಿದ ಪೂಜೆ ಲಿಂಗಕ್ಕೆ ಮುಟ್ಟುವುದಿಲ್ಲ, ಎನ್ನುತ್ತಾರೆ ಪ್ರಭು. ಅವರದೇ ಮತ್ತೊಂದು ವಚನ ಹೀಗಿದೆ:

’ಮಜ್ಜನಕ್ಕೆರೆದು, ಫಲವ ಬೇಡುವರಯ್ಯಾ! ತಮಗೆಲ್ಲಿ

ಯದೋ ಆ ಫಲವು ಸಿತಾಳಕ್ಕಲ್ಲದೆ? ಪತ್ರೆ ಪುಷ್ಪದಲ್ಲಿ

ಪೂಜಿಸಿ, ಫಲವ ಬೇಡುವರು! ತಮಗೆಲ್ಲಿಯದೋ ಆ ಫಲವು

ಗಿಡುಗಳಿಗಲ್ಲದೆ? ಧಾನ್ಯಗಳನರ್ಪಿಸಿ, ಪ್ರಸಾದದ ಫಲವ

ಬೇಡುವರು! ತಮಗೆಲ್ಲಿಯದೋ ಆ ಫಲವು ಹದಿನೆಂಟು

ಧಾನ್ಯಕ್ಕಲ್ಲದೆ? ಅಂಗದೊಡವೆಯ ಲಿಂಗಕ್ಕೆ ಕೊಟ್ಟು, ಫಲವ

ಬೇಡುವ ಸರ್ವ ಅನ್ಯಾಯಿಗಳನೇನೆಂಬೆ, ಗುಹೇಶ್ವರಾ?'

ಕನ್ನಡದಲ್ಲಿ ಒಂದು ಗಾದೆ ಇದೆ: 'ಅಗಸನ ಕತ್ತೆ ದೊಂಬರಿಗೆ ತ್ಯಾಗ' ಎಂದು! ಅದರ ಹಾಗೆ, ಯಾವುದೋ ಮಡುವಿನ ನೀರು, ಯಾವುದೋ ಗಿಡದ ಹೂ ಪತ್ರೆ, ಎಲ್ಲಿಯದೋ ನೆಲದ ಕಾಳು—ಇವುಗಳನ್ನು ತಂದು ಒಪ್ಪಿಸಿ, ಅದರ ಫಲ ಮಾತ್ರ ತಮಗೆ ಆಗಬೇಕೆಂದರೆ, ಅದು ಖಂಡಿತವಾಗಿಯೂ ಆಗದು, ಎನ್ನುತ್ತಾರೆ ಪ್ರಭು. ಅದರ ಬದಲು, ನಿಶ್ಚಲವಾದ ಮನಸ್ಸು ಎಂಬ ಒಂದು ಹೂವನ್ನು ಒಪ್ಪಿಸಿದರೆ ಸಾಕು, ಶಿವ ಮೆಚ್ಚಿ ತನ್ನನ್ನೇ ತಾನು ಕೊಟ್ಟುಕೊಳ್ಳುತ್ತಾನೆ ಎನ್ನುತ್ತಾರೆ.

"ಇಂಥ ಶುದ್ಧವಾದ ಸಾತ್ತ್ವಿಕವಾದ ಚಿತ್ತವನ್ನು ಬೆಳೆಯಿಸಿಕೊಂಡ ಹೊರತು, ಏನೇ ವಿಭೂತಿ ಧರಿಸಿಕೊಂಡರೂ, ಏನೇ ಲಿಂಗ ಕಟ್ಟಿಕೊಂಡರೂ, ಏನೇ ಶಿವನ ಹೆಸರು ಹೇಳಿದರೂ, ಅದೆಲ್ಲ ವ್ಯರ್ಥ ಎನ್ನುತ್ತಾರೆ, ಪ್ರಭು. ಇದಕ್ಕೆ ಬಹಳ ತಮಾಷೆಯಾದ ಒಂದು ಉಪಮಾನ ಕೊಡುತ್ತಾರೆ:

'ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದ

ರೇನು? ಹಸಿವು ಹೋಹುದೆ? ಅಂಗದ ಮೇಲೆ ಲಿಂಗ

ಸ್ವಾಯತವಾದರೇನು? ಇಟ್ಟ ಕಲ್ಲು ಮೆಳೆಯ ಮೇಲೆ

ಸಿಕ್ಕಿದಡೆ, ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ? ಇಟ್ಟಾತ

ಗುರುವೆ? ಇಂತಪ್ಪವರ ಕಂಡಡೆ ನಾನು ನಾಚುವೆನಯ್ಯ,

ಗುಹೇಶ್ವರಾ!'

ಹೊಟ್ಟೆಯ ಒಳಕ್ಕೆ ಒಂದು ತುತ್ತು ಅನ್ನ ಹಾಕಿದರೂ ಸಾಕು, ಹಸಿವು ಅಡಗುತ್ತದೆ. ಆದರೆ, ಹೊಟ್ಟೆಯ ಮೇಲೆ ಮೂಟೆಮೂಟೆ ವಿವಿಧ ಪಕ್ವಾನ್ನಗಳನ್ನು ಕಟ್ಟಿಕೊಂಡರೂ, ಅದೆಲ್ಲ ವ್ಯರ್ಥ. ಹಾಗೆಯೇ, ಮೈಯ ಮೇಲೆ ಲಿಂಗವನ್ನು ಧಾರಣೆಮಾಡಿದ ಭಕ್ತನಿಗೂ, ಅದನ್ನು ಧಾರಣೆಮಾಡಿಸಿದ ಗುರುವಿಗೂ ಲಿಂಗದ ಬಗ್ಗೆ ಮನಸ್ಸು ಶುದ್ಧವಾದ ಹೊರತು, ಆ ಲಿಂಗ ಒಂದು ಸಾಮಾನ್ಯವಾದ ಕಲ್ಲಿಗಿಂತ ಹೆಚ್ಚಿನ ಯೋಗ್ಯತೆ ಪಡೆಯುವುದಿಲ್ಲ. ಮೆಳೆಯ ಮೇಲೆ ಒಂದು ಕಲ್ಲು ಸಿಕ್ಕಿಬಿದ್ದರೆ, ಅದು ಆ ಮೆಳೆಗೆ ಎಷ್ಟು ಭೂಷಣವೋ ಅಷ್ಟೇ ಭೂಷಣ—ಅಂತರಂಗಶುದ್ಧಿಯಿಲ್ಲದವರ ಮೈಮೇಲಿನ ಈ ಹೊರಗಿನ ವೇಷ.

ಹೀಗೆಂದ, ಆ ವಿರಕ್ತನು ಇನ್ನೂ ಒಂದೆರಡು ವಚನಗಳನ್ನು ಹಾಡಿ, ಅರ್ಥಹೇಳಿ ನಿಲ್ಲಿಸಿದನು.

ಆಗ, ಪ್ರಭುದೇವರ ವಚನಗಳಿಂದ ಸಭೆಯವರ ಮನಸ್ಸೆಲ್ಲ ಪ್ರಸನ್ನವಾಯಿತು. ಅದೇ ಸಂದರ್ಭದಲ್ಲಿ ಪ್ರೌಢದೇವರಾಯರು ಪ್ರಭುವಿನ ಪುಣ್ಯಕಥೆಯನ್ನು ಕೇಳಬೇಕೆಂದು ಇಷ್ಟಪಟ್ಟರು. ಆ ಕೂಡಲೆ ಸಮುಖದ ಚಾರರು, ಅರಮನೆಯ ಸರಸ್ವತೀ ಭಂಡಾರಕ್ಕೆ ವೇಗದಿಂದ ಹೋಗಿ, '**ಪ್ರಭುದೇವರ ರಗಳೆ**' ಎಂಬ ಓಲೆಯ ಪುಸ್ತಕವೊಂದನ್ನು ತಂದರು. ಅದನ್ನು ಬರೆದಾತ—**ಹರಿಹರ** ಎಂಬ ಒಬ್ಬ ಮಹಾಕವಿ; ಅದೇ ತುಂಗಭದ್ರಾ ನದಿಯ ದಡದಲ್ಲಿ, ಅದೇ ಪಂಪಾವಿರೂಪಾಕ್ಷನ ಸಮ್ಮುಖದಲ್ಲಿ ಶಿವಸೇವೆ ಮಾಡಿಕೊಂಡಿದ್ದ ಒಬ್ಬ ಮಹಾಜೀವಿ. ಅರಸರ ಇಂಗಿತವನ್ನು ಅರಿತು ಆಸ್ಥಾನದ ಪ್ರಧಾನ ಗಮಕಿಯು ಆ ಪ್ರಭುದೇವರ ರಗಳೆಯನ್ನು ಸುಶ್ರಾವ್ಯವಾಗಿ ವಾಚನಮಾಡಿದನು.

ಹಿಂದೆ, ಕೈಲಾಸದಲ್ಲಿ ಹಂಪೆಯ ವಿರೂಪಾಕ್ಷನು ಓಲಗಕೊಟ್ಟು ಇರುವ ಸಮಯದಲ್ಲಿ—ಸಮ್ಮುಖದ ಶರಣರಲ್ಲಿ ಒಬ್ಬನಾದ **ನಿರ್ಮಾಯ** ಎಂಬವನು ಅಲ್ಲಿದ್ದ ಒಬ್ಬಾನೊಬ್ಬ ದೇವಕನ್ನೆಯನ್ನು ಕಂಡು ಆಸೆಪಟ್ಟನು. ಹರನು ಆ ಆಸೆ ಅನ್ಯೋನ್ಯವಾಗಿತ್ತು ಎಂಬುದನ್ನು ಗಮನಿಸಿ, ಕರುಣದಿಂದ ಹೇಳಿದನು: "ನೀವಿಬ್ಬರೂ ಹೀಗೆ ಆಸೆಗೆ ವಶರಾದವರು, ನಿಮ್ಮ ಆಸೆಯನ್ನು ಈಡೇರಿಸಿಕೊಳ್ಳುವುದಕ್ಕೋಸ್ಕರ, ಹೋಗಿ ಭೂಮಿಯಲ್ಲಿ ಹುಟ್ಟಿರಿ. ಅಲ್ಲಿ ಸಕಲ ಸುಖಗಳನ್ನು ಅನುಭವಿಸಿ, ಮತ್ತೆ ಬನ್ನಿರಿ."

ಆ ಕಾಲಕ್ಕೆ ಬಳ್ಳಿಗಾವೆ ಎಂಬುದು ಒಂದು ದೊಡ್ಡ ಶಿವಭಕ್ತರ ಊರು, ಶಿವದೇವಾಲಯಗಳ ಊರು. ಆ ಊರಿನ ಗಜಶಾಲೆಗೆ ಅಧ್ಯಕ್ಷನಾದವನಿಗೆ ನಿರ್ಮಾಯನು ಮಗನಾಗಿ ಹುಟ್ಟಿದನು. ಹುಟ್ಟಿದ ಮಗುವನ್ನು ಶಿವಪಾರ್ವತಿಯರು ಹರಸಿದರು. ಶಿವಲಿಂಗದ ಸ್ಪರ್ಶದಿಂದ ಮಗು ಕಣ್ದೆರೆಯಿತು. ಊರಿನ ಮುಖ್ಯದೈವವಾದ ಗೊಗ್ಗೇಶ್ವರನ ಪ್ರಸಾದದ ಬೆಣ್ಣೆಯನ್ನು ಮೊದಲು ಮಗುವಿಗೆ ಊಡಿಸಿದರು. ನಾಮಕರಣದ ದಿವಸ, ಮಗುವಿಗೆ 'ಅಲ್ಲಯ್ಯ' ಎಂದು ಹೆಸರಿಟ್ಟರು; ಅದೇ ಜಗಕ್ಕೆ 'ನಿರ್ಮಾಯ' ಎಂದಾಯಿತು. ಮಗು ತೂಗಿದ ತೊಟ್ಟಿಲಿನಲ್ಲಿ, ಎತ್ತಿಕೊಂಡವರ ಕೈಗಳಲ್ಲಿ, ಪ್ರೀತಿಯಿಂದ ಕಂಡವರ ಹೃದಯಗಳಲ್ಲಿ ದಿನೇ ದಿನೇ ಬೆಳೆಯಿತು.

ಅಂಬೆಗಾಲಿಡುತ್ತ, ನಡೆದು ಬೀಳುತ್ತ, ಮತ್ತೆ ಏಳುತ್ತ ಬೆಳೆದ ಹಾಗೆಲ್ಲ ಅಲ್ಲಮನು ಅನೇಕ ವಿದ್ಯೆಗಳನ್ನು ಕಲಿತನು. ಅವುಗಳಲ್ಲಿ ಒಂದು, ಆತನು ಕಲಿತದ್ದು—ಮೃದಂಗದ ಮಹಾವಿದ್ಯೆ, ಆ ವಿದ್ಯೆಯೊಡನೆ ಯೌವನವೂ ಆತನಿಗೆ ಏರುತ್ತಿತ್ತು.

ಒಂದು ದಿನ ಅಲ್ಲಮನು, ತಾನು ಕಲಿತದ್ದನ್ನು ಈಶ್ವರನಿಗೆ ಅರ್ಪಿಸಬೇಕೆಂದು, ಗೊಗ್ಗೇಶ್ವರನ ಗುಡಿಗೆ ಬಂದನು. ಅಲ್ಲಿ ಮೃದಂಗವನ್ನು ಮೈಯಲ್ಲಿ ಧರಿಸಿ, ಶೃಂಗಾರವಾದ ರಂಗದ ನಡುವೆ ನಿಂತು, ಪ್ರಸಿದ್ಧವಾದ ಗತಿಗಳನ್ನೂ ಹೊಸ ಹೊಸ ಗತಿಗಳನ್ನೂ ಮಧುರ ಮನೋಹರವಾಗಿ ನುಡಿಸಿ ಬಾರಿಸಿದನು. ಅವನ ಮದ್ದಳೆಯ ಧ್ವನಿ ಶಿವನಿಗೆ ಕರ್ಣಾಭರಣವಾಯಿತು, ಕೇಳಿದವರ ಮನಸ್ಸು ಪರವಶವಾಯಿತು.

ಆ ಹೊತ್ತಿಗೆ ಸರಿಯಾಗಿ, **ಕಾಮಲತೆ** ಎಂಬ ಒಬ್ಬಾಕೆ ಅಲ್ಲಿಗೆ ಬಂದಳು. ಆಕೆ ಬೇರೆ ಯಾರೂ ಅಲ್ಲ; ಆ ದಿನ ಹಿಂದೆ, ಕೈಲಾಸದಲ್ಲಿ ನಿರ್ಮಾಯನನ್ನು ಕಂಡು ಅನುರಾಗ ಹೊಂದಿದವಳೇ. ಈಗ, ಶಿವನ ಕರುಣದಿಂದ ಭೂಮಿಗೆ ಬಂದು, ಅದೇ ಬಳ್ಳಿಗಾವೆಯ ಧನದತ್ತನೆಂಬವನಿಗೆ ಮಗಳಾಗಿ ಹುಟ್ಟಿದ್ದಳು. 'ರತಿ ಗಿತಿ, ರಂಭೆಗಿಂಭೆಯರು ಕೂಡ ಇವಳ ಮುಂದೆ ಇನ್ನಿಲ್ಲ!' ಎಂಬಂತೆ ಬೆಳೆಯುತ್ತಿದ್ದಳು. ಇಂತಹ ಕಾಮಲತೆ ಆ ದಿವಸ ಗೊಗ್ಗೇಶ್ವರನ ಗುಡಿಗೆ ಬಂದಳು. ಈಶ್ವರನನ್ನು ಭಕ್ತಿಯಿಂದ ಪೂಜಿಸಿ ಹೋಗಬೇಕೆಂದು ಬಂದು, ಶಿವಲಿಂಗವನ್ನು ದರ್ಶನಮಾಡಿ, ಕೈಮುಗಿದು ಹೊರಟುಬರುವಾಗ ಅಲ್ಲಮನ ಮದ್ದಳೆಯ ಧ್ವನಿಯನ್ನು ಕೇಳಿದಳು.

“ಇದು ಯಾರು ಇಷ್ಟು ಸೊಗಸಾಗಿ ಬಾರಿಸುತ್ತಾರೆ!” ಎಂದು ಕಾಮಲತೆ ತಿರುಗಿ ನೋಡಿದರೆ—ಎದುರಿಗೆ ಒಬ್ಬ! ಇನ್ನೂ ಚಿಕ್ಕಪ್ರಾಯ! ಪಾರಿಜಾತದ ಹೂದಂಡೆ ಮುಡಿದಿದ್ದಾನೆ, ಸಂಪಗೆಯ ಎಸಳು ಸಿಕ್ಕಿಸಿದ್ದಾನೆ! ಕಸ್ತೂರಿಯ ತಿಲಕ ತಿದ್ದಿದ್ದಾನೆ! ಮುತ್ತಿನ ಮಾಲೆಯನ್ನು ಧರಿಸಿದ್ದಾನೆ! ಕಣ್ಣುಗಳ ಕಾಂತಿ, ಕಿವಿಯ ಕರ್ಣಾಭರಣ ಫಳಫಳ ಎನ್ನುತ್ತಿವೆ! ಇಂಥವನನ್ನು ಕಂಡು ಕಾಮಲತೆ ಮೈಮರೆತು ನಿಂತಳು.

ಅತ್ತ, ಅಲ್ಲಮನು ಕೂಡ, ಮೃದಂಗವನ್ನು ಬಾರಿಸುವಾಗ ಆಕಡೆ ಈಕಡೆ ತಿರುಗುತ್ತಾ, ಪಕ್ಕನೆ ಕಾಮಲತೆಯನ್ನು ಕಂಡನು. ಕಂಡ ಕೂಡಲೆ ತನ್ನ ಮದ್ದಳೆಯನ್ನು ಮರೆತನು, ಬಾರಿಸುವುದನ್ನು ಮರೆತನು, ತನ್ನನ್ನೇ ಮರೆತನು, ಶಿವನನ್ನೂ ಮರೆತನು!

ನಿರ್ಮಾಯನೂ ಕಾಮಲತೆಯೂ ಒಬ್ಬರನ್ನೊಬ್ಬರು ಕುರಿತು ನೋಡಿದರು. ಅದೇ ಗಳಿಗೆಯಲ್ಲೇ ಇಬ್ಬರೂ ಮೈಮರೆತರು. ಈತನು ತನ್ನ ಜೊತೆಗಾರರ ಮೇಲೆ ಜೋತು ಮೂರ್ಛೆಬಿದ್ದ, ಆಕೆ ತನ್ನ ಜೊತೆಗಾತಿಯರ ತೋಳಲ್ಲಿ ಮೂರ್ಛೆಹೋದಳು.

ಕಾಮಲತೆಯ ಸಖಿಯರು ಅದನ್ನು ಕಂಡು, ಆಶ್ಚರ್ಯಪಟ್ಟರು. 'ಇಂಥ ಗಾಢವಾದ ಸ್ನೇಹ, ಇದು ಅಪೂರ್ವ!' ಎಂದುಕೊಳ್ಳುತ್ತ, ಅಲ್ಲಮನನ್ನು ಹಾಗೇ

ಅಲ್ಲಿಂದಲೇ ತಮ್ಮ ಮನೆಗೆ ಕರೆಸಿಕೊಂಡರು. ಅವನನ್ನು ಅಲ್ಲಿಯೇ ಕಾಮಲತೆಯೊಡನೆಯೇ ನಿಲ್ಲಿಸಿಕೊಂಡರು.

ಅಲ್ಲಮನು ಹೀಗೇ ಹಲವು ಕಾಲ ಕಾಮಲತೆಯ ಸಂಗಡ ಸುಖವಾಗಿದ್ದನು. ಆ ವೇಳೆಗೆ ಈಶ್ವರನು ಅವರಿಗೆ ಕೊಟ್ಟು ಕಳುಹಿಸಿದ್ದ ಕಾಲದ ಅವಧಿ ಮುಗಿಯುತ್ತಾ ಬಂದಿತ್ತು. ಕಾಮಅತೆಗೆ ಇದ್ದಕ್ಕಿದ್ದಂತೆ ಮಹಾಜ್ವರ ಹತ್ತಿತು. ಜ್ವರದ ತಾಪವನ್ನು ತಡೆಯಲಾರದೆ, ಕಾಮಲತೆ, ಈ ಲೋಕದ ಸುಖ ಇನ್ನು ತನಗೆ ಸಾಕು ಎಂದುಕೊಂಡು, ನೆಟ್ಟನೆ ಕೈಲಾಸಕ್ಕೆ ನಡೆದಳು.

ಆಕೆಯ ತಾಯಿತಂದೆ ಮೊರೆಯಿಟ್ಟರು, ಸಖೀಜನರು ಗೋಳಾಡಿದರು, ಬಂಧುಬಾಂಧವರು ಮರುಗಿದರು, ನಿಂತು ನೆರೆದವರೆಲ್ಲ ಕಣ್ಣೀರಿಟ್ಟರು, ಇವರ ನಡುವೆ ಅಲ್ಲಮನ ಅವಸ್ಥೆ ವರ್ಣನೆಗೆ ಮೀರಿದ್ದು. ಚಿತ್ರದಲ್ಲಿ ಬರೆದ ಬೊಂಬೆಯಂತೆ, ಎರಕ ಹೊಯ್ದ ವಿಗ್ರಹದಂತೆ, ಕಲ್ಲಿನಲ್ಲಿ ಕಡೆದ ಪ್ರತಿಮೆಯಂತೆ ಆತ ನಿಶ್ಚೇಷ್ಟನಾಗಿದ್ದನು. ಅಲ್ಲಮನಿಗೆ ಯಾರು ಯಾರು ಏನೇನೋ ಸಮಾಧಾನ ಹೇಳಿ, ಮೆಲ್ಲನೆ ಆತನನ್ನು ತಾಯಿತಂದೆಯ ಬಳಿಗೆ ಕರೆದುತಂದರು.

ಅಲ್ಲಮನಿಗೆ ಕಾಮಲತೆ ಹೊರತು ಇನ್ನೊಂದರ ಅರಿವಿಲ್ಲ; ಹುಚ್ಚು ಹಿಡಿದವನ ಹಾಗೆ ಆಗಿದ್ದ. ಸುಮ್ಮನೆ ಚಿಂತೆಮಾಡುವನು, ನೆಲ ನೋಡಿ ನಿಟ್ಟುಸಿರು ಬಿಡುವನು, ತಲೆ ಬಾಗಿಸಿ ಕಣ್ಣೀರಿಡುವನು.

ಹೀಗೆ ಕುಳಿತು, ಹೆಬ್ಬೆರಳಿನಿಂದ ನೆಲವನ್ನು ಕೆರೆಯುತ್ತಿರುವಾಗ, ಒಂದು ಅದ್ಭುತವಾಯಿತು! ಅವನು ಕೆರೆದ ನೆಲದಿಂದ ಶಿವಜ್ಞಾನದ ಮೊಳಕೆ ಎದ್ದಹಾಗೆ, ಒಂದು ಚಿನ್ನದ ಕಲಶ ಎದ್ದು ಕಾಣಿಸಿಕೊಂಡಿತು. ಅಲ್ಲಮನು ಕೌತುಕದಿಂದ. ಇನ್ನಷ್ಟು ಅಗೆದನು. ಕಡೆಗೆ ಅಗೆಯಲಾರದೆ ಬಿಟ್ಟನು. ಕೂಡಲೆ ಅದನ್ನು ಊರಿನ ದೊರೆಗೆ ತಿಳಿಸಲು ಓಡಿದನು. ಆ ಸಂಭ್ರಮದಲ್ಲಿ ಕಾಮಲತೆಯನ್ನು ಮರೆತನು.

ಅರಸನು ಆ ವಿಚಿತ್ರವನ್ನು ಕಾಣುವುದಕ್ಕಾಗಿ ಬೇಗಬೇಗ ಆನೆಯ ಮೇಲೆ ಬಂದನು. ಕಲಶವಿದ್ದ ಭೂಮಿಗೆ ಬಂದಾಗ, ಆನೆ ಎಷ್ಟೇ ಅಂಕುಶದಿಂದ ತಿವಿದರೂ, ಮುಂದೆ ಹೋಗದೆ ನಿಂತುಬಿಟ್ಟಿತು. ದೊರೆ ಇನ್ನೂ ಆಶ್ಚರ್ಯಪಟ್ಟು, ಆನೆಯಿಂದ ಇಳಿದು, ಅಲ್ಲಮನ ಕೈಹಿಡಿದು ಬಂದನು. ಅರಸನ ಆಜ್ಞೆಯ ಮೇರೆಗೆ ಪರಿಜನವೆಲ್ಲ ಹಾರೆ ಗುದ್ದಲಿಗಳನ್ನು ಹಿಡಿದು ಅಗೆದರು. ಮಣ್ಣು ದಾರಿಬಿಡುತ್ತ ಹೋದ ಹಾಗೆಲ್ಲ, ಒಂದು ಶಿವದೇವಾಲಯ ಗೋಚರವಾಗುತ್ತ ಬಂತು. ಅರಸನೂ ಪರಿಜನರೂ ಅಲ್ಲಮನೂ ಆ ಅದ್ಭುತವನ್ನು ಕಂಡು ಸಂತೋಷಗೊಂಡರು.

ಅರಸನು ದೇವಾಲಯದ ಬಾಗಿಲಿಗೆ ಬಂದನು. ಬಾಗಿಲು ಮುಚ್ಚಿತ್ತು. ಕದವನ್ನು ತೆರೆದು ನೋಡುವ ಧೀರರು ಯಾರು? ಹೆದರದೆ ಒಳಗೆ ಪ್ರವೇಶಿಸುವವರು ಯಾರು? ಸುತ್ತ ಇದ್ದವರಲ್ಲಿ ಯಾರೂ ಮಾತಾಡಲಿಲ್ಲ. ಆಗ ಅಲ್ಲಮನು ತಾನು ಮುಂದೆ ಬಂದನು. "ಇದುವರೆಗೆ ಜೊತೆಗಿದ್ದ ಕಾಮಲತೆ ಇನ್ನಿಲ್ಲ. ಮತ್ತೆ, ಈ ದೇಹದ ಅಭಿಲಾಷೆ ನನಗೆ ಇನ್ನು ಏಕೆ?" ಎಂದು ವೈರಾಗ್ಯವನ್ನು ತಾಳಿ, ಮನಸ್ಸು ನಿಶ್ಚಯಮಾಡಿಕೊಂಡನು. "ನಾನು ಒಳಗೆ ಹೋಗುತ್ತೇನೆ." ಎಂದನು. ಎಲ್ಲರೂ ಬೆರಗಾದರು. ಕೆಲವರು 'ಅಸಾಧ್ಯ' ಎಂದರು. ಕೆಲವರು 'ಈತನು ಕಾರಣಪುರುಷನಿರಬೇಕು.' ಎಂದರು.

ಅಲ್ಲಮನು ಮೈಗೆಲ್ಲ ಮನಃಪೂರ್ತಿಯಾಗಿ ಭಸಿತವನ್ನು ಲೇಪನ ಮಾಡಿಕೊಂಡು, 'ಶಿವನೇ ಶರಣು' ಎನ್ನು ತ್ತಾ ತುಂಬುನಿಷ್ಠೆಯಿಂದ ಬಾಗಿಲನ್ನು ತಳ್ಳಿದನು. ತೆರೆದ ಬಾಗಿಲಿನ ಮೂಲಕ ನೇರವಾಗಿ ಒಳಗೆ ಹೊಕ್ಕನು. ಒಳಗೆ ಅವನ ರೀತಿಯೇ ಬೇರೆಯಾಯಿತು. ಗಳಗಳನೆ ಬಂದು, ಅಲ್ಲಿ ಕೆಂಡ ಮಹಾಲಿಂಗದ ಕಾಲಿಗೆ ಎರಗಿದನು.

ಅಲ್ಲಿಯೇ ಪಕ್ಕದಲ್ಲಿ ಅನಿಮಿಷಯ್ಯ ಎಂಬ ಒಬ್ಬ ಸಿದ್ಧನು ಶಿವಧ್ಯಾನದಲ್ಲಿದ್ದನು. ಬತ್ತಿಯಿಲ್ಲದ, ಎಣ್ಣೆಯಿಲ್ಲದ ಒಂದು ಶಿವಕಳೆಯ ಬೆಳಗು ಆತನ ಸುತ್ತ ಪಸರಿಸಿತ್ತು. ಪದ್ಮಾಸನವನ್ನು ಹಾಕಿ, ಹುಲಿಯ ಚರ್ಮ ಹೊದೆದು, ವಿಭೂತಿಯನ್ನು ಪೂಸಿ, ರುದ್ರಾಕ್ಷಿ

ಧರಿಸಿ, ಫಣಿಕುಂಡಲವಿಟ್ಟು, ಜಡೆ ಇಳಿಯಬಿಟ್ಟು, ಕೈಯ ಶಿವಲಿಂಗದಲ್ಲಿ ಕಣ್ಣನೋಟವನ್ನು ನಟ್ಟು, ಆ ಶಿವಯೋಗಿ ಕುಳಿತಿದ್ದನು.

ಆ ಶಿವಯೋಗಿಯನ್ನು ಕಂಡ ಕೂಡಲೆ, ಅಲ್ಲಮನ ಚಿತ್ತದಲ್ಲಿ ಶಿವಜ್ಞಾನ ಹುಟ್ಟಿತು. ಆಗಲೇ ಆ ಶಿವಯೋಗಿಯನ್ನು ಕುರಿತು ಹೊಗಳತೊಡಗಿದನು: "ನಿರುಪಮನಾದ ಮಹಾಯೋಗಿಯೆ! ಶಿವನನ್ನು ಕೈಕೊಂಡವನೆ! ನೋಟದಲ್ಲಿ ಶಿವಲಿಂಗವನ್ನು ಸೆರೆಗೈದವನೆ! ಮದನನನ್ನು ಮರ್ದಿಸಿದವನೆ!"

ಅವನು ಹೊಗಳಿದ್ದನ್ನು ಕೇಳಿ, ಅನಿಮಿಷಯ್ಯನು ಹಿಗ್ಗಿದನು. "ಈತನು ಕಾರಣಪುರುಷನು. ಇನ್ನು ನನಗೆ ಈ ದೇಹದ ತೊಡಕು ಸಾಕು." ಎಂದುಕೊಂಡನು. ಅದೇ ಹೊತ್ತಿಗೆ, ಅಲ್ಲಮನು ಆತನ ಮುಂದೆ ತನ್ನ ಕೈಯನ್ನು ಒಡ್ಡಿದನು. ಒಡನೆ, ಅನಿಮಿಷಯ್ಯನ ಕೈಯ ಶಿವಲಿಂಗ ಬಂದು, ಅಲ್ಲಮನ ಕೈಯಲ್ಲಿ ಇಳಿಯಿತು. ಅದೇ ಕ್ಷಣದಲ್ಲೇ, ಆ ಶಿವಲಿಂಗದಲ್ಲಿ ಆ ಅನಿಮಿಷನ ಜೀವ ಹೋಗಿ ಬೆರೆತು, ಆತನ ದೇಹ ನಿಶ್ಚೇಷ್ಟವಾಗಿ ನೆಲದ ಮೇಲೆ ಮಲಗಿತು.

ಅಲ್ಲಮನು ಆಗ ತನ್ನ ಅಂಗೈಯ ಲಿಂಗವನ್ನು ಹಾಗೇ ಧರಿಸಿಕೊಂಡು, ಅಲ್ಲಿಂದ ಹೊರಹೊರಟನು. ಆ ಲಿಂಗ ತನ್ನನ್ನು ನಡೆಸಿದಲ್ಲಿಗೆ ನಡೆದನು. ಊರವರೆಲ್ಲ ಆಶ್ಚರ್ಯದಿಂದ ನೋಡಿದರು.

"ಎಲ್ಲಿಯ ಕಾಮಲತೆ! ಎಲ್ಲಿಯ ಅಲ್ಲಮ! ಎಲ್ಲಿಂದ ಎಲ್ಲಿಗೆ ಸ್ನೇಹಸಂಬಂಧ! ಎಲ್ಲಿಯ ಕಲಶ! ಎಲ್ಲಿಯ ಶಿವಾಲಯ! ಎಲ್ಲಿಂದ ಎಲ್ಲಿಗೆ ಶಿವಜ್ಞಾನದ ಅನುಭವ! ಈ ಕಾಮಲತೆಯೆಂಬವಳ ನೆಪದಲ್ಲಿ ಈತನಿಗೆ ಶಿವನ ಪ್ರೇಮ ಹೇಗೆ ಸಂಪಾದನೆಯಾಯಿತು! ಅಂಗೈಯಲ್ಲಿ ಅಮೃತದ ಫಲವನ್ನು ಪಡೆದಂತೆ ಅನಿಮಿಷಯ್ಯನ ಶಿವಲಿಂಗ ಈತನ ಕೈಗೆ ಬಂತಲ್ಲ! ಶಿವತತ್ತ್ವ ಈತನಿಗೆ ಕರತಲಾಮಲಕವಾಯಿತು!" ಎಂದರು.

ಅಲ್ಲಮನು ಮೈಮೇಲೆ ಎಚ್ಚರವಿಲ್ಲದೆ ಈಶ್ವರನ ಇಚ್ಚೆಯಂತೆ ನಡೆದು ಹೋಗುತ್ತಿದ್ದನು. ತಲೆಗೂದಲು ಬಿಚ್ಚಿಹೋದದ್ದು ಗೊತ್ತಾಗಲಿಲ್ಲ, ಜೊತೆಗೆ ಬಂದವರ ಅರಿವಿಲ್ಲ, ಅವರ ಮಾತನ್ನು ಕಿವಿ ಕೇಳದು, ಊರೆಂದರಿಯ, ಕಾಡೆಂದರಿಯ, ನಡೆದದ್ದೇ ದಾರಿ, ನುಡಿದದ್ದೇ ವೇದ—ಎಂಬಂತೆ ನಡೆದುಹೋದ. ಆತ ಮುಟ್ಟಿದ ಮರ ಮನುಷ್ಯರಾಗಿ ನಡೆದುವು, ಆತ ಮೆಟ್ಟಿದ ಪ್ರಾಣಿ ಸ್ವರ್ಗಕ್ಕೆ ಸಂದವು, ಮರಗಳು ಆತನನ್ನು ಹಿಂಬಾಲಿಸಿದುವು, ಬೆಟ್ಟಗಳು ಅರುಗಾಗಿ ಆತನಿಗೆ ದಾರಿಕೊಟ್ಟುವು, ಹುಲಿ ಹುಲ್ಲೆ ಹಾವು ನವಿಲು ಸಿಂಹ ಆನೆ ಇವು ತಮ್ಮ ಸಹಜವೈರವನ್ನು ಬಿಟ್ಟುವು. ಹೀಗೆ ಸಾಕ್ಷಾತ್ ಶಿವನ ಅವತಾರವೇ ಎಂಬಂತೆ ಅಲ್ಲಮನು ಚರಿಸುತ್ತಿದ್ದನು.

ಆತನ ಅಂಗೈಯೆಂಬ ಸಿಂಹಾಸನದಲ್ಲಿ ವಿರಾಜಿಸುತ್ತಿದ್ದ ಲಿಂಗಕ್ಕೆ ವನದೇವತೆಯೆರು ಬಂದು ವಂದಿಸುವರು. ಹೊಸ ಚಿಗುರುಗಳನ್ನು ಬೀಸುವರು, ಹೂವಿನ ಗೊಂಚಲನ್ನು ಚಾಮರವಿಕ್ಕುವರು. ಹೀಗೆ ಅಲ್ಲಮನು ಶಿವಲಿಂಗರಾಜ್ಯದ ಸುಖದಲ್ಲಿ ಇದ್ದನು.

ಅಲ್ಲಮನು ತನ್ನ ಕೈಯ ಲಿಂಗಕ್ಕೆ ತನ್ನ ದೃಷ್ಟಿಯಿಂದ ಮಜ್ಜನ ಮಾಡಿಸುವನು, ಅರಳಿದ ಕಣ್ಣುಗಳೆಂಬ ಹೂವಿನಿಂದ ಪೂಜಿಸುವನು, ತನ್ನ ಸುವಾಸನೆಯ ನಿಟ್ಟುಸಿರಿನಿಂದ ಧೂಪವಿಕ್ಕುವನು, ತುಂಬು ಮನಸ್ಸಿನ ಬೆಳಗಿನಿಂದ ಆರತಿ ಎತ್ತುವನು, ನಿಷ್ಠೆಯಿಂದ ತನ್ನ ಸ್ನೇಹವನ್ನು ಆರೋಗಣೆಗೆ ನೀಡುವನು. ಹೀಗೇ ಅನೇಕ ದಿವಸಗಳು ಗಿಡಮರಗಳ ನಡುವೆ, ಅನೇಕ ಮಾಸಗಳು ಗಿರಿಗಹ್ವರಗಳಲ್ಲಿ, ಅನೇಕ ವರ್ಷಗಳು ನದೀತೀರಗಳಲ್ಲಿ, ಮತ್ತೆ ಅನೇಕ ಕಾಲ ಲತಾಮಂಟಪಗಳಲ್ಲಿ ಸುಳಿದಾಡಿದನು. ಆತನು ಎಲ್ಲಿ ಇದ್ದರೆ ಅಲ್ಲೇ ವಸಂತಕಾಲ, ಎಲ್ಲಿ ಇದ್ದರೆ ಅಲ್ಲೇ ದಿವ್ಯಕ್ಷೇತ್ರ ಆಯಿತು.

ಹೀಗೆ ಈಶ್ವರನ ಇಚ್ಚೆಯಂತೆ ಸಂಚಾರಮಾಡುತ್ತ; ಅಲ್ಲಮನು ಬಸವಣ್ಣನನ್ನು ಕಂಡು, ಶಿವತತ್ತ್ವದ ದಾರಿಯನ್ನು ಆತನಿಗೆ ತೋರಿದನು. ಮುಂದೆ ಸೊನ್ನಲಾಪುರದಲ್ಲಿ ಸಿದ್ಧರಾಮನನ್ನು ಕಂಡು, ಆತನಿಗೆ ಬುದ್ಧಿ ಹೇಳಿದನು. ಅಲ್ಲಿಂದ ಶ್ರೀಪರ್ವತಕ್ಕೆ ಬಂದನು.

ಅಲ್ಲಿ ಕೈಕಾಲುಗಳುಳ್ಳ ಸರ್ಪಗಳು, ಮುದದಿಂದ ಮಾತನಾಡುವ ವೃಕ್ಷಗಳು, ನಡೆದಾಡುವ ಗಿಡಗಳು, ಎಂಟು ಮುಖದ ಮೃಗಗಳು, ಹೆಜ್ಜೆಹೆಜ್ಜೆಗೂ ಉರಿಯುತ್ತಿರುವ ದಿವ್ಯೌಷಧಿಗಳು, ಹಾಡುವ ಬಳ್ಳಿಗಳು, ಸುಳಿದಾಡುವ ಕಲ್ಲುಗಳು, ನೋಡುವ ಮರಗಳು, ರೆಕ್ಕೆಯ ಆನೆಗಳು, ಸೊಗಸಾದ ಧ್ವನಿಕೊಡುವ ಗುಹೆಗಳು, ಬೇಡಿದ್ದನ್ನು ನೀಡುವ ಮಾವಿನಮರಗಳು, ಇವೇ ಮೊದಲಾದ ಅನೇಕ ಅದ್ಭುತಗಳನ್ನು ನೋಡುತ್ತ, ಅಲ್ಲಮನು ನಿರ್ಭೀತನಾಗಿ ಕದಳೀವನದ ದಾರಿಯನ್ನು ಹಿಡಿದನು.

ಕದಳೀವನದ ಬಾಗಿಲಲ್ಲಿ ಶಿವನ ಕಿಂಕರನಾದ ಭೈರವನು ನಿಂತಿದ್ದನು. ಆತನು ಅಲ್ಲಮನಿಗೆ ಶಿವನ ಕಡೆಗೆ ಹೋಗುವ ದಾರಿಯನ್ನು ತೋರಿದನು. ಅಲ್ಲಮನು ಆ ದಾರಿಯಲ್ಲಿ ಸುತ್ತಿಕೊಂಡಿದ್ದ ಹಾವುಗಳ ಬಳ್ಳಿಯನ್ನು ದಾಟಿದನು; ಗರಗಸದಂತೆ ಕುಯ್ಯುವ ಬಾಳೆಗಳನ್ನು ದಾರಿಬಿಡಿಸಿದನು, ಎದುರಿಗೆ ಬಂದ ವಿಷಕನ್ಯೆಯರನ್ನು ತಳ್ಳಿಕೊಂಡು ಹೋದನು, ಬೀಸಿಬಂದ ವಿಷದ ಗಾಳಿಗೆ ಮೆಯ್ಯೊಡ್ಡಿದನು, ಉರಿಯುವ ಹಳ್ಳಗಳನ್ನು ಹೊಕ್ಕು ದಾಟದನ್ನು ಮೇಲೆ ಬೀಳಬಂದ ಭೇತಾಳರನ್ನು ನಿಲ್ಲಿಸಿದನು, ಅಲ್ಲಿ ತಪಸ್ಸು ಮಾಡುತ್ತಿದ್ದ ಹನುಮಂತನನ್ನು ಕಂಡನು, ಅಡಿಗೆ ಒಡ್ಡಿಬಂದ ಆಯುಧಗಳನ್ನು ಮೆಟ್ಟಿ ನಡೆದನು. ಮುಂದೆ, ಮನುಷ್ಯರ ಮೋರೆಯ ಆನೆಯ ಮೈಯವರನ್ನೂ ನಾನಾ ವಿಧದ ಕಣ್ಣು ಕೈ ಕಾಲುಗಳುಳ್ಳವರನ್ನೂ ಗಾವುದ ಅಗಲ ಗಾವುದ ಉದ್ದ ಆದ ಇರುವೆಗಳನ್ನೂ, ಸಾವಿಲ್ಲದ ಅನೇಕ ಸಿದ್ದರ ಚೆಲುವು ಮೂರ್ತಿಗಳನ್ನೂ ನೋಡುತ್ತ ನಡೆದನು. ಹರಿವ ಕೆಂಡದ ಹೊಳೆಯನ್ನು ಹಾಯ್ದನು, ಅರಳಿದ ವಿಷಪುಷ್ಪವನ್ನು ಮೂಸಿನೋಡಿದನು.

ಹೀಗೆ ಅನೇಕನಾದ ಅದ್ಭುತಗಳನ್ನೂ ಭಯಾನಕಗಳನ್ನೂ ನೋಡುತ್ತ ಬರುತ್ತಿದ್ದಂತೆಯೇ ಎದುರಿಗೆ ಕೈಲಾಸಗಿರಿ ಕಾಣಿಸಿಕೊಂಡಿತು. ಆ ಬೆಳ್ಳಿಯ ಬೆಟ್ಟವು ತಂಪಾದ ಕೋಟಿಸೂರ್ಯರ ಕಿರಣಗಳಿಂದ ಬೆಳಗುತ್ತ, ಚಂದ್ರನ ತವರುಮನೆ ಇದ್ದಹಾಗಿತ್ತು. ಅಲ್ಲಿ ಅನೇಕಾನೇಕ ದೇವತೆಗಳು, ನಾಗೇಂದ್ರರು, ಕಿನ್ನರರು, ಖೇಚರರು,

ಸಿದ್ಧರು, ಪನ್ನಗರು, ಗಂಧರ್ವರು ಮುಂತಾದವರ ನಡುವೆ ಪಾರ್ವತೀ ಪರಮೇಶ್ವರರು ಓಲಗ ಕೊಟ್ಟಿದ್ದರು.

ಅಲ್ಲಮನು ಬರುವುದನ್ನು ಪರಮೇಶ್ವರನು ದೂರದಿಂದಲೇ ಕಂಡನು. ಕಂಡಕೂಡಲೆ ಹರನು "ಇತ್ತ ಬಾ! ಇತ್ತ ಬಾ!" ಎಂದು ಕೈನೀಡಿ ಕರೆದನು.

ಅಲ್ಲಮನು ತನ್ನ ಅಂಗೈಯ ಲಿಂಗದಿಂದ ನೋಟವನ್ನು ಬೇರೆ ಮಾಡದೆ, ಹಾಗೇ ಬಂದು, ಕೈಯ ಇಷ್ಟಲಿಂಗ ಸಹಿತವಾಗಿ ಹರನ ಚರಣಗಳಿಗೆ ಎರಗಿ, ಕುಳಿತನು.

ಆತನು ಹೋಗಿ, ಇದ್ದು, ಅನುಭವಿಸಿ, ಬಂದ ಕಥೆಯೆಲ್ಲವನ್ನೂ ಪರಮೇಶ್ವರನು ಸಾವಧಾನದಿಂದ ಕೇಳಿಕೊಂಡನು. ಆತನ ಮೇಲೆ ಪ್ರೀತಿಯ ಮಳೆಯನ್ನು ಕರೆದು, ಮೊದಲಿನಂತೆಯೇ ಆತನಿಗೆ ನಿರ್ಮಾಯನೆಂಬ ಹೆಸರು ಕೊಟ್ಟು, ಮತ್ತೆ ಆತನನ್ನು ಗಣಪದವಿಯಲ್ಲೇ ನಿಲ್ಲಿಸಿದನು. ಆಗ ಅಲ್ಲಿ ಅಲ್ಲಮನು ಶಿವನ ಸಾರೂಪ್ಯದಿಂದ ಒಪ್ಪಿದನು. ಆತನ ಸುಪ್ರಭೆ ಶಿವನ ಸುಪ್ರಭೆಯಲ್ಲಿ ಸೇರಿ ಒಂದಾಯಿತು.

ಹೀಗೆಂದು ಆಸ್ಥಾನದ ಗಮಕಿಯು ಹರೀಶ್ವರನ 'ಪ್ರಭುದೇವರ ರಗಳೆ'ಯನ್ನು ವಾಚನಮಾಡಿ ನಿಲ್ಲಿಸಿದನು. ಅರಸರು ಅವನಿಗೆ ಮನ್ನಣೆಮಾಡಿಸಿ, ತಮ್ಮ ಮಂತ್ರಿಯಾದ ಜಕ್ಕಣಾರ್ಯನ ಕಡೆಗೆ ನೋಡಿದರು. ಆಸ್ಥಾನಕ್ಕೆ ಹೊಸದಾಗಿ ಬಂದಿದ್ದ **ಚಾಮರಸ** ಎಂಬ ಕವಿಯ ವಿಚಾರವಾಗಿ, ಆತನು ಬರೆದಿದ್ದ '**ಪ್ರಭುಲಿಂಗಲೀಲೆ**' ಎಂಬ ಕಾವ್ಯದ ವಿಚಾರವಾಗಿ ಮಂತ್ರಿ ದೊರೆಗಳಲ್ಲಿ ಬಿನ್ನವಿಸಿಕೊಂಡಿದ್ದನು. ಆ ಕಾವ್ಯವನ್ನು ಆ ಕವಿಯಿಂದಲೇ ಓದಿಸಿ ಕೇಳಬೇಕೆಂದೂ, ಅದಕ್ಕೆ ಮಂತ್ರಿಯಾದ ಜಕ್ಕಣಾರ್ಯನು ತಾನೇ ಅರ್ಥವಿವರಣೆಯನ್ನು ಮಾಡಬೇಕೆಂದೂ ಅರಸರು ಇಷ್ಟಪಟ್ಟಿದ್ದರು. ಅದರಂತೆ, ಅರಸರ ಇಂಗಿತವನ್ನು ತಿಳಿದು, ಮಂತ್ರಿ ಚಾಮರಸನಿಗೆ ಸಂಜ್ಞೆ ಮಾಡಿದನು.

ಚಾಮರಸನು ಎದ್ದು ನಿಂತನು. "ಅರಸೆ, ಇದುವರೆಗೂ ನಮ್ಮ ಕವಿಕುಲಗುರುವಾದ ಹರೀಶ್ವರರ ಕೃತಿಯನ್ನು ಕೇಳಿದ್ದೀರಿ. ಅಲ್ಲಮಪ್ರಭುದೇವರು ಕಾಮಲತೆಯ ಮೋಹಕ್ಕೆ ಸಿಕ್ಕಿದ್ದರು, ಕಾಮಲತೆಯನ್ನು ಕಳೆದುಕೊಂಡ ಮೇಲೆ ಅವರಿಗೆ ವೈರಾಗ್ಯ ಬಂತು—ಎಂಬ ಈ ರೀತಿಯ ಕಥಾಪದ್ಧತಿ, ಇದು ಒಂದು ಸಂಪ್ರದಾಯ. ಆದರೆ ಪ್ರಭುದೇವರು ಜನ್ಮತಃ ಮಾಯೆಯನ್ನು ಗೆದ್ದವರು; ಕಾಮವನ್ನು ಮೀರಿದವರು, ಕೋಟಲೆಗಳನ್ನು ಕಾಣದವರು, ಕರುಣೆಯಿಂದ ತುಂಬಿದವರು—ಎಂಬ ಈ ರೀತಿಯ ಕಥಾಪದ್ಧತಿ, ಇದೂ ಒಂದು ಸಂಪ್ರದಾಯ. ನಾನು ಈ ಎರಡನೆಯ ಸಂಪ್ರದಾಯವನ್ನು ಕಾವ್ಯಮಾಡಿ ಹೇಳುತ್ತೇನೆ." ಎಂದನು.

ಶ್ರೀಮದಮಲಜ್ಞಾನಭಕ್ತಿ

ಪ್ರೇಮ ವೇದಪುರಾಣಶಾಸ್ತ್ರ

ಸ್ತೋಮನುತ ನತಚಾರುಚರಣಾಂಭೋಜ ಘನಮಹಿಮ|

ನಾಮ ರೂಪು ಕ್ರೀಕಳಾಪ ವಿ

ರಾಮನನುಪಮ ದಿವ್ಯತೇಜೋ

ವ್ಯೋಮಮೂರುತಿ ಗುರುಗುಹೇಶ್ವರಲಿಂಗ ಶರಣಾರ್ಥಿ||

ಎಂದು ಅಲ್ಲಮದೇವರನ್ನು ಸ್ತುತಿಮಾಡಿ ಆರಂಭಿಸಿದನು. ಮೊದಲು ಬಸವಣ್ಣನವರನ್ನು ವಂದಿಸಿದನು; ಬಳಿಕ ಚೆನ್ನಬಸವ, ಸಿದ್ಧರಾಮ, ಮಹದೇವಿ, ಮಡಿವಾಳ ಮಾಚಯ್ಯ ಮುಂತಾದ ಹಿರಿಯ ಶರಣರಿಗೆ ಶರಣಾರ್ಥಿಯನ್ನು ಸಲ್ಲಿಸಿದನು. "ಇದು ನಾನು ಆಡುವ ಮಾತಲ್ಲ. ನನ್ನ ಹೃದಯನೆಂಬ ಗುಹೆಯಲ್ಲಿರುವ ಈಶ್ವರನಾದ ಅಲ್ಲಮಪ್ರಭು ದೇವರು ಆಡಿಸಿದ ಮಾತು. ಆದ್ದರಿಂದ ಇದು ಕೇವಲ ಮನರಂಜನೆಗಾಗಿ ಬರೆದ ಕಥೆಯಲ್ಲ,

ಭಕ್ತರಾದವರು ತಮ್ಮ ತನು ಮನ ಧನಗಳನ್ನು ವ್ಯಯಮಾಡಿ, ಲಿಂಗವನ್ನು ಮೆಚ್ಚಿಸುವ ಮಾರ್ಗವನ್ನು ಈ ಕಥೆಯಲ್ಲಿ ಕಾಣಬಹುದು." ಎಂದನು.

ಕುರಿಗಳೋಪಾದಿಯಲಿ ಕಬ್ಬಿನ

ಹೊರಗಣೆಲೆಯನು ಮೇದಕಟ ಮೆಲು

ಕಿರಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ |

ನೆರೆ ಸವಿವ ಗಜದಂತೆ ಭಕ್ತಿಯ

ತೆರನ ತಿಳಿದಾಚರಿಸಬೇಕೆಂ

ದರಿವವರು ಲಾಲಿಸುವುದೀ ಪ್ರಭುಲಿಂಗಲೀಲೆಯನು ||

ಎಂದು ಪೀಠಿಕೆ ಹಾಕಿದನು.

ಅನಂತರ ಕಾವ್ಯದ ಕಥೆಗೆ ಪ್ರಾರಂಭವಾಯಿತು. ಅಲ್ಲಮನನ್ನು ಗುರುರಾಜ, ಭಕ್ತವತ್ಸಲ, ಮಾಯಾಕೋಲಾಹಲ, ಗುರು ಗುಹೇಶ್ವರ ಲಿಂಗ, ಪ್ರಭುರಾಯ ಎಂದು ಎಷ್ಟೆಷ್ಟು ತೆರನಾಗಿ ಕೀರ್ತಿಸಿದರೂ ಚಾಮರಸನಿಗೆ ತೃಪ್ತಿಯಿಲ್ಲ; ಆ ಹೆಸರಿಗೆ ಹೊಂದಿದ ಕಥಾಭಾಗಗಳನ್ನು ಎಷ್ಟು ಹೇಳಿದರೂ ತಣಿವಿಲ್ಲ.

ಅರಸರಿಗೆ ಆ ದಿವಸ ಕೇಳಿದ ಸ್ವಲ್ಪ ಕಥಾಭಾಗ ಮನಸ್ಸಿಗೆ ತುಂಬ ಹಿಡಿಸಿತು. ದಿನಕ್ಕೆ ಸ್ವಲ್ಪಸ್ವಲ್ಪದಂತೆ ಆ ಕೃತಿಯಷ್ಟನ್ನೂ ಕೇಳಬೇಕೆಂದು ಅವರು ಇಷ್ಟಪಟ್ಟರು. ಅವರ ಅಪೇಕ್ಷೆಯಂತೆ, ಚಾಮರಸನು ಒಂದು ವಾರದ ಕಾಲ ತನ್ನ ಕೃತಿಯನ್ನು ಅರಸರ ಎದುರು ಓದಿ ಮುಗಿಸಿದನು. "ಕಬ್ಬಿನ ತೋಟಕ್ಕೆ ಕುರಿಗಳು ನುಗ್ಗಿ, ಮೇಲಿನ ಎಲೆಯನ್ನು ತಿಂದು, ಇದೇ ಸವಿ ಎನ್ನುತ್ತವೆ. ಆನೆಯಾದರೋ, ಒಳಗೆ ನುಗ್ಗಿ, ಕಬ್ಬಿನ ಸಮಸ್ತ ರಸವನ್ನೂ

ಸೂರೆಗೊಳ್ಳುತ್ತದೆ." ಎಂದು ಕವಿ ಪೀಠಿಕೆಯಲ್ಲಿ ಹೇಳಿದ್ದನ್ನು ಜಕ್ಕಣಾರ್ಯನು ತನ್ನ ಅರ್ಥವಿವರಣೆಯಿಂದ ಸಮರ್ಥಿಸಿದನು.

ಹೀಗೆ ಒಂದು ವಾರ ಈ ರಸದ ಔತಣ ಆದ ಮೇಲೆ—

ಬಾಲರನು ವೃದ್ಧರನು ಭೂಮೀ

ಪಾಲರನು ಬಡವರನು ಸದಮಲ

ಶೀಲರನು ಗುಣಿಗಳನು ಗೋಬ್ರಾಹ್ಮರನು ಭಕ್ತರನು |

ಲೋಲತೆಯಲಿ ಸಮಸ್ತ ಜಾತಿಯ

ಜಾಲವನು ಸರ್ವರನು ಕರುಣಿಸಿ

ಪಾಲಿಸುತಲಿರುತಿರ್ದನೆಮ್ಮಯ ಗುರು ಗುಹೇಶ್ವರನು ||

ಎಂದು ಚಾಮರಸನು ಹಾಡಿದಾಗ, ಪ್ರೌಢದೇವರಾಯರು ಪರಮಪ್ರೀತಿಯನ್ನು ತಾಳಿ, ಹೀಗೆ ಹೇಳಿದರು:

"ನಮ್ಮ ಕಾಲದಲ್ಲಿ ನಮ್ಮ ದೇಶದ ಕವಿಯೊಬ್ಬನು ಇಂಥ ಕೃತಿಯನ್ನು ರಚಿಸಿರುವುದು ನಮ್ಮ ಭಾಗ್ಯ. ಮಂತ್ರಿವರ್ಯ, ಒಳ್ಳೆಯ ಶುಭ ದಿವಸವನ್ನು ನೋಡಿ, ಈ ಕೃತಿರತ್ನವನ್ನು ಆನೆಯ ಮೇಲಿರಿಸಿ ಮೆರೆವಣಿಗೆ ಮಾಡಿಸುವುದಾಗಲಿ."

ಅದಕ್ಕೆ, ಮಂತ್ರಿಯಾದ ಜಕ್ಕಣಾರ್ಯನು ಹೇಳಿದನು: "ಅರಸರ ಆಜ್ಞೆಯನ್ನು ನಾವು ಶಿರಸಾವಹಿಸುವೆವು. ಜೊತೆಗೆ ನನ್ನದೂ ಒಂದು ಬಿನ್ನಹ ಉಂಟು. ವಯಸ್ಸಾದ ನಾನು ಮಂತ್ರಿಪದವಿಯಿಂದ ನಿವೃತ್ತನಾಗಲು ನನಗೆ ಅಪ್ಪಣೆ ಕೊಟ್ಟು, ಇಂಥ ದೈವಭಕ್ತನೂ ಬುದ್ಧಿವಂತನೂ ಆದ ಈ ಚಾಮರಸನನ್ನು ಮಂತ್ರಿಯಾಗಿ ಪ್ರಭುಗಳು ನೇಮಿಸಿಕೊಳ್ಳಬೇಕು."

ಮಂತ್ರಿಯ ಮಾತು ಅರಸರಿಗೆ ಒಪ್ಪಿಗೆಯಾಯಿತು. ಸಭಾಸದರೂ ಅದನ್ನು ಅನುಮೋದಿಸಿದರು.

ಹೀಗೆ ಚಾಮರಸನು ಅಲ್ಲಮಪ್ರಭುದೇವರನ್ನು ನಾಯಕನನ್ನಾಗಿ ಮಾಡಿಕೊಂಡು, ತನ್ನ 'ಪ್ರಭುಲಿಂಗಲೀಲೆ'ಯನ್ನು ಬರೆದನು. ಪ್ರಭುದೇವರ ಪುಣ್ಯಕಥೆಯನ್ನು ಕೃತಿಮಾಡಿದ್ದರ ಪರಿಣಾಮವಾಗಿ—ಆ ಕೃತಿಗೆ ಆನೆಯ ಮೇಲೆ ಮೆರೆವಣಿಗೆ ಆಯಿತು; ಆ ಕವಿಗೆ ಮಂತ್ರಿಪದವಿ ಪ್ರಾಪ್ತವಾಯಿತು; ಅಷ್ಟೇ ಅಲ್ಲ ಪ್ರಭುದೇವರ ಹೆಸರು ಇರುವವರೆಗೂ ಚಾಮರಸನ ಹೆಸರೂ ಶಾಶ್ವತವಾಯಿತು.

"ಅಮ್ಮಾ! ಅಪ್ಪನಿಗೆ ನಿದ್ರೆ ಎಂದು ಕಾಣುತ್ತೆ." ಎಂದ, ಶಿವು.

"ಹೌದು, ಪಾಪ, ಬೆಳಗ್ಗೆ ಯಿಂದ ಕಚೇರಿ ಕೆಲಸ. ಅವರಿಗೂ ಆಯಾಸ. ನೀನಾದರೂ, ಪಾಪ, ಬಂದ ಹೊತ್ತಿನಿಂದ ಬಿಡುವೇ ಇಲ್ಲದೆ ಮಾತನಾಡುತಾ ಇದ್ದೀಯಲ್ಲೊ. ಇವೊತ್ತಿಗೆ ಸಾಕು. ಇನ್ನೇನಾದರೂ ಮಿಕ್ಕಿದ್ದರೆ ನಾಳೆ ಹೇಳುವೆಯಂತೆ. ದೀಪ ಆರಿಸು. ಮಲಗಿಕೊಳ್ಳೋಣ." ಎಂದರು, ಶಿವೂತಾಯಿ.

ಶಿವು ನಗುತ್ತ, "ನನಗೂ ಸರಕು ಮುಗಿದುಹೋಗುತಾ ಬಂತು, ಅಮ್ಮಾ!" ಎಂದ.

"ಓಹೋ! ಅದಕ್ಕೋಸ್ಕರ, ನನಗೆ ನಿದ್ರೆ ಬಂತು, ಎಂದು ನೆಪಹಾಕಿದೆಯ? ಕಳ್ಳ!" ಎಂದರು, ಶಿವೂತಂದೆ. "ನಿಜವಾಗಿ ನನಗೆ ನಿದ್ರೆ ಬಂದಿರಲಿಲ್ಲ. ಅದು ಯಾವುದೋ, 'ದುಂಬಿ ದುಂಬಿ' ಎಂದು ಬಸವಣ್ಣನವರ ವಚನ, ಅದನ್ನು ಜ್ಞಾಪಿಸಿಕೊಳ್ಳುತ್ತಿದ್ದೆ. ನಿನಗೆ ಅದು ಗೊತ್ತಿದ್ದರೆ, ಹೇಳಯ್ಯ. ಕಿವಿತುಂಬ ಅದನ್ನು ತುಂಬಿಕೊಂಡು, ನಿದ್ರೆ ಮಾಡೋಣ."

ಶಿವು "ಸದ್ಯಃ, ಗೊತ್ತಿರುವ ವಚನವನ್ನೇ ಕೇಳಿದರಲ್ಲಾ! ಮರ್ಯಾದೆ ಉಳಿಯಿತು." ಎಂದು, ರಾಗವಾಗಿ, ಹಾಡಿದ:

ವಚನದಲ್ಲಿ ನಾಮಾಮೃತ ತುಂಬಿ,

ನಯನದಲ್ಲಿ ನಿಮ್ಮ ಮೂರುತಿ ತುಂಬಿ

ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ,

ಮನದಲ್ಲಿ ನಿಮ್ಮ ನೆನಹು ತುಂಬಿ,

ಕೂಡಲ ಸಂಗಮದೇವಾ—

ನಿಮ್ಮ ಚರಣಕಮಲದೊಳಗಾನು ತುಂಬಿ.

ಆ ವಚನವನ್ನು ಕಿವಿಯಾರೆ ಕೇಳಿ, ಮನಸ್ಸುತುಂಬ ಅದನ್ನು ತುಂಬಿಕೊಂಡು, ತಾಯಿ ತಂದೆ ಮಗ ಮೂವರೂ ಆ ರಾತ್ರೆ ಸುಖನಿದ್ರೆಗೆ ಒಳಗಾದರು.